ಅನಾದಿಕಾಲದಿಂದ ಪ್ರತಿಯೊಬ್ಬರಿಂದಲೂ ಶ್ರುತ(ಕೇಳಲ್ಪಟ್ಟವು)ಗಳಾಗಿವೆಯೇ ವಿನಃ ಮಾಡಲ್ಪಟ್ಟವುಗಳಲ್ಲ. ಆದ್ದರಿಂದ ಶ್ರುತಿಗಳೆನಿಸಿವೆ. ಏಕರೀತಿಯಿಂದ ನಿರಂತರವಾಗಿ ಆಮ್ನಾತಗಳಾಗಿರುವುದರಿಂದ (ಪಠಿತವಾಗಿರುವುದರಿಂದ) ಆಮ್ನಾಯಗಳೆನಿಸಿವೆ.

"ಪಾಂತಿ ಶಂಸಾಧನಾಶ್ಚೇತಿ ವೇದಾಃ ಪಶವ ಈರಿತಾಃ" ಎಂಬಂತೆ ಪರತತ್ತ್ವದ ಅರಿವನ್ನುಂಟುಮಾಡಿ ನಮ್ಮನ್ನು ನಿರಂತರ ಕಾಪಾಡುವುದರಿಂದ ವೇದಗಳನ್ನು 'ಪಶುಗಳು' ಎಂದು ಕೂಡ ಕರೆಯಲಾಗಿದೆ.

ಈ ವೇದಗಳನ್ನು ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ ಎಂಬುದಾಗಿ ವಿಭಜಿಸಿ ವೈದಿಕಜ್ಞಾನ ಸಾಮಾನ್ಯರಿಗೂ ತಲುಪುವಂತೆ ಅಸಾಮಾನ್ಯ-ಕಾರ್ಯವನ್ನು ಮಾಡಿದವನು ವೇದವ್ಯಾಸರೂಪಿ ಭಗವಂತ. ದ್ವಾಪರದಲ್ಲಿ ಬ್ರಹ್ಮರುದ್ರಾದಿಗಳ ಪ್ರಾರ್ಥನೆಗೆ ಓಗೊಟ್ಟು ಈ ಭೂಮಿಯಲ್ಲಿ ಅವತರಿಸಿ ವೇದಗಳನ್ನು ವಿಭಾಗಮಾಡಿದ ಈ ಭಗವಂತ ಮಂದಮತಿಗಳಾದ ಸುಜನರ ಮೇಲಿನ ಕರುಣೆ-ಯಿಂದ ಅವುಗಳನ್ನು ಶಾಖೋಪಶಾಖೆಗಳಾಗಿ ವಿಂಗಡಿಸಿದ[3] ಕೂಡ. ಅವುಗಳಲ್ಲಿ ಋಗ್ವೇದವನ್ನು 24 ಉಪಶಾಖೆಗಳಾಗಿ, ಯಜುರ್ವೇದವನ್ನು 101 ಉಪಶಾಖೆ-ಗಳಾಗಿ, ಸಾಮವೇದವನ್ನು ಸಾವಿರ ಉಪಶಾಖೆಗಳಾಗಿ, ಅಥರ್ವವೇದವನ್ನು 12 ಉಪಶಾಖೆಗಳಾಗಿ ವಿಂಗಡಿಸಿದ.

ಇವುಗಳಲ್ಲಿ ಸಾಮವೇದದ ತಾಂಡಿಶಾಖೆಯ ಬ್ರಾಹ್ಮಣಕ್ಕೆ ಸೇರಿದ ಉಪನಿಷತ್ತೇ ಛಾಂದೋಗ್ಯೋಪನಿಷತ್. ಉಪನಿಷತ್ತುಗಳಲ್ಲಿ ಈಶ, ಕಠ, ಕೇನ, ಷಟ್ಪ್ರಶ್ನ ಮಾಂಡೂಕ್ಯ, ಮುಂಡಕ, ತೈತ್ತಿರೀಯ, ಐತರೇಯ, ಛಾಂದೋಗ್ಯ, ಬೃಹದಾರಣ್ಯಕ ಎಂಬುದಾಗಿ ದಶೋಪನಿಷತ್ತುಗಳು ಪ್ರಸಿದ್ಧವಾಗಿವೆ.

### ಉಪನಿಷತ್ತು ಎಂದರೇನು ?

1) 'ಉಪನಿಷಣ್ಣಂ ಬ್ರಹ್ಮತತ್ತ್ವಮತ್ರ ಇತ್ಯುಪನಿಷತ್'

ಪರಬ್ರಹ್ಮತತ್ತ್ವವು ಇಲ್ಲಿ (ಉಪನಿಷತ್ತಿನಲ್ಲಿ) ಸನ್ನಿಹಿತವಾಗಿದೆ. ಆದ್ದರಿಂದ ಇದು ಉಪನಿಷತ್.

2) 'ಉಪ ನಿಷಾದಯತಿ ಇತಿ ಉಪನಿಷತ್'

---

3. 'ಚಕ್ರೇ ವೇದತರೋಃ ಶಾಖಾ ದೃಷ್ಟ್ವಾ ಪುಂಸೋಽಲ್ಪಮೇಧಸಃ' (ಭಾಗ. 1-3-21)

ನಿಷಾದ ಎಂದರೆ ನಾಶ, ನಮ್ಮ ಸಾಂಸಾರಿಕದುಃಖವನ್ನು ಹಾಗೂ ಅಜ್ಞಾನವನ್ನು ನಾಶ ಮಾಡುವುದರಿಂದ ಇದು 'ಉಪನಿಷತ್' ಎಂದು ಶಂಕರಾಚಾರ್ಯರ ಅಂಬೋಣ.

3) ಅಥವಾ ವಿಶರಣ= ಗತಿ ಎಂಬ ಅರ್ಥವನ್ನು ಕೊಡುವ ಷದ್ ಧಾತುವಿನಿಂದ ನಿಷ್ಪನ್ನವಾದ ನಿಷಾದಶಬ್ದಕ್ಕೆ ಗತಿ ಎಂದರೆ ಜ್ಞಾನವೆಂಬ ಅರ್ಥವೂ ಇದೆ. ಆಗ ಉಪನಿಷಾದಯತಿ ಭಗವತ್ತತ್ವಂ ಜ್ಞಾಪಯತಿ ಅಂದರೆ ಭಗವತ್ತತ್ವವನ್ನು ತಿಳಿಸಿ ಕೊಡುವುದರಿಂದ ಉಪನಿಷತ್.

4) 'ಉಪನಿಷಾದಯತಿ ಉಪಗಮಯತಿ ಬ್ರಹ್ಮ ಇತಿ ಉಪನಿಷತ್'

ಪರಬ್ರಹ್ಮನನ್ನು ದೊರಕಿಸಿಕೊಡುವುದರಿಂದ ಇದಕ್ಕೆ 'ಉಪನಿಷತ್' ಎಂದು ಹೆಸರು.

5) 'ಉಪನಿಷೀದತಿ ಪ್ರಾಪ್ನೋತಿ ಬ್ರಹ್ಮಾತ್ಮಭಾವೋಽನಯಾ ಇತಿ ಉಪನಿಷತ್'

ಬ್ರಹ್ಮೈಕ್ಯವನ್ನು ಹೊಂದಲು ಸಾಧನವಾದುದು ಉಪನಿಷತ್ ಎಂದು ಅದ್ವೈತಿಗಳ ಆಶಯ.

6) ಪರಬ್ರಹ್ಮನ ಬಗ್ಗೆ ಅರಿವನ್ನುಂಟುಮಾಡಿ ತನ್ಮೂಲಕ ನಮ್ಮನ್ನು ಬೌದ್ಧಿಕವಾಗಿ ಎತ್ತರಕ್ಕೇರಿಸಬಲ್ಲವುಗಳು ಉಪನಿಷತ್ತುಗಳು.

7) ಅಥವಾ, ಆಚಾರ್ಯ ಮಧ್ವರು ಹೇಳುವಂತೆ ಜ್ಞಾನಿಗಳ ಯೋಗ್ಯತೆಗನು-ಗುಣವಾದ ಜ್ಞಾನವೇ[1] ಉಪನಿಷತ್ ಎನಿಸುವುದು.

ವೇದಗಳ ಕೊನೆಯಲ್ಲಿ ಬಂದದ್ದರಿಂದ ಇವುಗಳಿಗೆ ವೇದಾಂತವೆಂದೂ ಹೆಸರು.

### ಉಪನಿಷತ್ತುಗಳೆಷ್ಟು?

ಉಪನಿಷತ್ತುಗಳ ಸಂಖ್ಯೆಯಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಕೆಲವರು ಉಪನಿಷತ್ತುಗಳ ಸಂಖ್ಯೆ 1180 ಎಂದೂ. ಇನ್ನು ಕೆಲವರು 200 ಎಂದೂ ಮತ್ತೆ ಕೆಲವರು 108 ಎಂದೂ ಹೇಳುವರು. ಇವುಗಳಲ್ಲಿ ದಶೋಪನಿಷತ್ತುಗಳು ಬಹಳ

---

1. 'ಸ್ವಯೋಗ್ಯಂ ತು ಪರಿಜ್ಞಾನಂ ತಸ್ಯೋಪನಿಷತ್ ಸ್ಮೃತಮ್' (ಛಾ.ಉ.ಭಾ. 1-2-5)

ಪ್ರಸಿದ್ಧಗಳಾಗಿವೆ. ಅವುಗಳಲ್ಲಿ ಬೃಹದಾರಣ್ಯಕವನ್ನು ಬಿಟ್ಟರೆ ಅತ್ಯಂತವಿಸ್ತಾರವಾದ ಉಪನಿಷತ್ತೆಂದರೆ ಛಾಂದೋಗ್ಯೋಪನಿಷತ್. ಇದಕ್ಕೆ ಅದ್ವೈತಸಿದ್ಧಾಂತ ಪ್ರತಿಪಾದಕರಾದ ಶಂಕರಾಚಾರ್ಯರ ಭಾಷ್ಯ ಹಾಗೂ ರಂಗರಾಮಾನುಜರು ಬರೆದಿರುವ ವಿಶಿಷ್ಟಾದ್ವೈತಪರವಾದ ವ್ಯಾಖ್ಯಾನವು ಉಪಲಬ್ಧವಿದೆ.

## ಆಚಾರ್ಯಮಧ್ವರ ಛಾಂದೋಗ್ಯೋಪನಿಷದ್‌ಭಾಷ್ಯ

ಈ ಛಾಂದೋಗ್ಯೋಪನಿಷತ್ತಿಗೆ ಶ್ರೀಮನ್ಮಧ್ವಾಚಾರ್ಯರು ಬರೆದಿರುವ ಭಾಷ್ಯವು ಅತ್ಯಪೂರ್ವವಾಗಿದ್ದು ಉಪನಿಷತ್ತಿನ ಅಂತರಂಗವನ್ನು ಅರಿಯಲು ವಿಶೇಷವಾಗಿ ಸಹಾಯಕವಾಗಿದೆ. ಮೇಲುನೋಟಕ್ಕೆ ಆಚಾರ್ಯರ ಭಾಷ್ಯ ಸಾಮಾನ್ಯದಂತೆ ಕಂಡರೂ ಒಳನೋಟದಲ್ಲಿ ವಿಶಿಷ್ಟಾರ್ಥದಿಂದ ಕಂಗೊಳಿಸುತ್ತಿದೆ. ಉಪನಿಷತ್ತಿನ ಅನೇಕ ಪದಗಳಿಗೆ ಇಲ್ಲಿ ಸುಂದರವಾದ ಪ್ರಾಮಾಣಿಕವಾದ ಅರ್ಥವನ್ನು ವರ್ಣಿಸಿದ್ದಾರೆ.

ಮೇಲುನೋಟಕ್ಕ ಅದ್ವೈತವನ್ನು ಪ್ರತಿಪಾದಿಸುವಂತೆ ಕಂಡುಬರುವ ''ಸೋऽಹಮಸ್ಮಿ'' ''ಸರ್ವಂ ಹ ಭವತಿ'' ''ಸ ಏವೇದಂ ಸರ್ವಂ'' ''ಆತ್ಮೈವೇದಂ ಸರ್ವಂ'' ''ಅಹಮೇವೇದಂ ಸರ್ವಂ'' ''ವಾಚಾರಂಭಣಂ ವಿಕಾರೋ ನಾಮಧೇಯಂ'' ''ಸರ್ವಂ ಖಲ್ವಿದಂ ಬ್ರಹ್ಮ'' ''ಏಕಮೇವಾದ್ವಿತೀಯಂ ಬ್ರಹ್ಮ'' ''ತತ್ವಮಸಿ'' ಮುಂತಾದ ಅನೇಕ ವಾಕ್ಯಗಳಿಗೆ ಇಲ್ಲಿ ಭೇದಪರವಾಗಿ ಸೊಗಸಾಗಿ ವ್ಯಾಖ್ಯಾನ ಮಾಡಿದ್ದಾರೆ.

ಇದಕ್ಕೆ ಸಂಬಂಧಪಟ್ಟಂತೆ ಕೆಲವುಉದಾಹರಣೆಗಳನ್ನು ಗಮನಿಸೋಣ.

### ಸೋऽಹಮಸ್ಮಿ ಎಂಬ ವಾಕ್ಯವು ಅಭೇದಪರವಲ್ಲ

''ಅಥ ಹ ಏನಂ ಗಾರ್ಹಪತ್ಯೋऽನುಶಶಾಸ– ಪೃಥಿವೀ । ಅಗ್ನಿಃ । ಅನ್ನಂ ಆದಿತ್ಯಃ ।' ಇತಿ । ಯ ಏಷ ಆದಿತ್ಯೇ ಪುರುಷೋ ದೃಶ್ಯತೇ ಸೋऽಹಮಸ್ಮಿ । ಸ ಏವಾಹಮಸ್ಮಿ।''

ಎಂಬ ನಾಲ್ಕನೇ ಅಧ್ಯಾಯದ 13ನೇಖಂಡದ ಈ ಮಂತ್ರದಲ್ಲಿ ಬರುವ 'ಸೋऽಹಮಸ್ಮಿ' 'ಸ ಏವಾಹಮಸ್ಮಿ' ಎಂಬ ವಾಕ್ಯದಲ್ಲಿ ಅಭೇದವು ಪ್ರತಿಪಾದಿಸಲ್ಪಟ್ಟಂತೆ ಕಂಡು ಬರುವುದು. ಈ ಮಂತ್ರಕ್ಕೆ ಆಚಾರ್ಯ ಶಂಕರರ ಭಾಷ್ಯ ಹೀಗಿದೆ.

'ಪೃಥಿವ್ಯಗ್ನಿರನ್ನಮಾದಿತ್ಯ ಇತಿ ಮಮೈತಾಶ್ಚತಸ್ರಸ್ತನವಃ । ತತ್ ಯ ಆದಿತ್ಯೇ ಪುರುಷೋ ದೃಶ್ಯತೇ ಸೋಽಹಮಸ್ಮಿ ಗಾರ್ಹಪತ್ಯೋಽಗ್ನಿಃ ಸ ಏವಾಹಮಾದಿತ್ಯೇ ಪುರುಷೋಽಸ್ಮೀತಿ ಪುನಃ ಪರಾವೃತ್ತ್ಯಾ ಸ ಏವಾಹಮಸ್ಮೀತಿ ಯೋಜ್ಯಮ್ ॥ (ಶಾ.ಭಾ. ಪು. 475)

ಗಾರ್ಹಪತ್ಯಾಗ್ನಿಯು ಉಪಕೋಸಲನನ್ನು ಕುರಿತು ಹೇಳುವ ಮಾತಿದು. ಆದಿತ್ಯನಲ್ಲಿ ಯಾವ ಪುರುಷ(ಭಗವಂತ) ಕಣ್ಣಿಗೆ ಗೋಚರಿಸುವನೋ ಅವನೇ ನಾನು (ಗಾರ್ಹಪತ್ಯಾಗ್ನಿ). ನಾನೇ ಆದಿತ್ಯನಲ್ಲಿರುವ ಪುರುಷನಾಗಿದ್ದೇನೆ ಎಂದು ಆದಿತ್ಯನಲ್ಲಿ ನಿಯಾಮಕನಾಗಿ ನೆಲೆಸಿರುವ ಭಗವಂತನಿಗೂ ಗಾರ್ಹಪತ್ಯಾಗ್ನಿಗೂ ಅಭೇದವನ್ನು ಹೇಳಲಾಗಿದೆ ಎಂದು ಐಕ್ಯವಾದಿಗಳ ಅಂಬೋಣ.

ಆದರೆ ಮಧ್ವಾಚಾರ್ಯರು ಇದರ ಬಗ್ಗೆ ತಮ್ಮ ಭಾಷ್ಯದಲ್ಲಿ ವಿಮರ್ಶೆ ಮಾಡುತ್ತಾ, ಇಲ್ಲಿ, ನಿಜವಾಗಿ ಆದಿತ್ಯನಲ್ಲಿರುವ ಭಗವಂತನಿಗೂ ಗಾರ್ಹ-ಪತ್ಯಾಗ್ನಿಗೂ ಅಭೇದವನ್ನು ಹೇಳುವ ತಾತ್ಪರ್ಯ ವೇದಕ್ಕೆ ಇದ್ದಲ್ಲಿ, ಆಗ 'ಯ ಏಷ ಆದಿತ್ಯಃ ಪುರುಷಃ ಸೋಽಹಮಸ್ಮಿ' ಆದಿತ್ಯನೇ ನಾನು ಎಂದು ವೇದದಲ್ಲಿ ವಾಕ್ಯರೀತಿಯು ಕಂಡುಬರುತ್ತಿತ್ತು. ಆದರೆ ''ಆದಿತ್ಯೇ ಪುರುಷಃ'' ಎಂದು ಭೇದ-ವ್ಯಪದೇಶ ಸ್ಪಷ್ಟವಾಗಿರುವುದರಿಂದ ಈ ವಾಕ್ಯವು ಅಭೇದಪರವೆಂದು ವ್ಯಾಖ್ಯಾನಿಸು-ವುದು ಹರಸಾಹಸವೇ ಸರಿ.

ಈ ಮಂತ್ರದಲ್ಲಿ ಬರುವ ಪೃಥಿವಿ ಮೊದಲಾದ ಶಬ್ದಗಳು ಭಗವದ್ವಾಚಕಗಳೇ ವಿನಹ ಜಡವಾಚಕಗಳಲ್ಲ ಎಂದು ತತ್ತ್ವಸಂಹಿತೆಯ ವಚನದಿಂದ ಆಚಾರ್ಯರು ಸಾಧಾರವಾಗಿ ಸಮರ್ಥಿಸಿದ್ದಾರೆ.

ಪೃಥುತ್ವಾತ್ ಪೃಥಿವೀ ವಿಷ್ಣುಃ ಅಗ್ನಿಶ್ಚಾಪ್ಯಂಗನೇತೃತಃ ।<br>
ಅನ್ನಮತ್ತೃತ್ವತೋ ನಿತ್ಯಂ ಆದಿತ್ಯಶ್ಚಾಽದಿರೂಪತಃ ॥

ಭಗವಂತನು ವ್ಯಾಪ್ತನಾದುದರಿಂದ ಪೃಥಿವೀ ಎಂದು, ಜಗತ್ತಿಗೆ ನೇತಾರ-ನಾದ್ದರಿಂದ ಅಗ್ನಿ ಎಂದು, ಜಗತ್ತನ್ನು ಸಂಹರಿಸುವುದರಿಂದ ಅನ್ನ ಎಂದು. ಜಗತ್ತಿಗೆ ಮೂಲಕಾರಣನಾದ್ದರಿಂದ ಆದಿತ್ಯ ಎಂದೂ ಹೇಳಲ್ಪಡುತ್ತಾನೆ.

## ''ಸರ್ವಂ ಹ ಭವತಿ'' ಎಂಬ ವಾಕ್ಯ ಅಭೇದಪರವಲ್ಲ

ಛಾಂದೋಗ್ಯೋಪನಿಷತ್ತಿನ ಎರಡನೇ ಅಧ್ಯಾಯದ 21ನೇ ಖಂಡದ 2ನೇ ಮಂತ್ರದಲ್ಲಿ ಬರುವ ''ಸ ಯ ಏವಮೇತತ್ ಸಾಮ ಸರ್ವಮಸ್ಮಿನ್ ಪ್ರೋತಂ ವೇದ ಸರ್ವಂ ಹ ಭವತಿ'' ಎಂಬ ವಾಕ್ಯದಲ್ಲಿ ಐಕ್ಯವು ಪ್ರತಿಪಾದಿತವಾದಂತೆ ತೋರುವುದು. ಈ ಮಂತ್ರಕ್ಕೆ ಶಾಂಕರಭಾಷ್ಯದಲ್ಲಿ ''ಸರ್ವವಿಷಯಸಾಮವಿದಃ ಫಲಂ ಸರ್ವಂ ಹ ಭವತಿ । ಸರ್ವೇಶ್ವರೋ ಭವತೀತ್ಯರ್ಥಃ ।(ಪು.402)'' ಎಂದು ವ್ಯಾಖ್ಯಾನಿಸಲಾಗಿದೆ.

ಆದರೆ ಶ್ರೀಮನ್ಮಧ್ವಾಚಾರ್ಯರು ತಮ್ಮ ಭಾಷ್ಯದಲ್ಲಿ ಇಲ್ಲಿ ಉಪಾಸಕನಿಗೆ ಹೇಳಿದ ಸರ್ವಭಾವವೆಂದರೆ ಸರ್ವೇಶ್ವರತ್ವವಲ್ಲ, ಮತ್ತೇನೆಂದರೆ, ಅವನ ಯೋಗ್ಯತೆಗನು-ಗುಣವಾಗಿ ಪೂರ್ಣಪ್ರಮಾಣದ ಉನ್ನತಿಯನ್ನು ಹೊಂದುವುದು. ಇದಕ್ಕೆ

''ಯಾದೃಶ್ಯೇವೋನ್ನತಿರ್ಯೋಗ್ಯಾ ತಸ್ಯಾಃ ಸರ್ವಾತ್ಮನಾऽऽಯತಿಃ ।
ಸರ್ವಭಾವಸ್ತು ವಿಜ್ಞೇಯೋ ನ ತು ಸರ್ವಸ್ವರೂಪತಾ ॥''

ಎಂದು ಆಧಾರವನ್ನೂ ನೀಡಿದ್ದಾರೆ.

ಇಲ್ಲಿ ಸರ್ವಭಾವವೆಂದರೆ ಸರ್ವಸ್ವರೂಪತ್ವ ಎನ್ನುವುದೂ ಸರಿಯಲ್ಲ. ಏಕೆಂದರೆ ಸರ್ವವಸ್ತುಗಳ ಸ್ವರೂಪವನ್ನು ಪಡೆಯುವುದು ಪುರುಷಾರ್ಥವಲ್ಲ. ಎಲ್ಲರ ಸ್ವರೂಪವನ್ನು ಉಪಾಸಕನು ಪಡೆಯುತ್ತಾನೆಂದಾದರೆ ನರಕದಲ್ಲಿದ್ದು ದುಃಖವನ್ನು ಅನುಭವಿಸುತ್ತಿರುವ ದುರ್ಜೀವರ ಸ್ವರೂಪವನ್ನೂ ಪಡೆಯುತ್ತಾನೆಂದು ಹೇಳಬೇಕಾ-ಗುವುದು. ಈ ವಿಷಯವನ್ನು ಆಚಾರ್ಯರು ತಮ್ಮ ಭಾಷ್ಯದಲ್ಲಿ ''ನಚ ಸರ್ವ-ಸ್ವರೂಪತಾ ಪುರುಷಾರ್ಥಃ । ನಾರಕಿತ್ವಾದೇರಪಿ ಪ್ರಾಪ್ತೇಃ ।'' ಎಂಬುದರಿಂದ ನಿರೂಪಿಸಿದ್ದಾರೆ.

ಇದರ ಮೇಲೆ ಐಕ್ಯವಾದಿಗಳು ಹೀಗೆ ಆಕ್ಷೇಪಿಸಬಹುದು. ಮಂತ್ರದ ಕೊನೆಯಲ್ಲಿ 'ಸರ್ವಮಸ್ಮೀತ್ಯುಪಾಸೀತ' ಎಂದು ಸರ್ವೈಕ್ಯದ ಉಪಾಸನೆಯನ್ನು ವಿಧಿ ಸಲಾಗಿದೆ. ಅದಕ್ಕನುಗುಣವಾಗಿ ಉಪಾಸಕನಿಗೆ ದೊರೆಯುವ ಫಲವೂ ಸರ್ವಸ್ವರೂಪತ್ವವೇ ಎಂದು ಹೇಳುವುದು ಉಚಿತ ಎಂದು.

ಆದರೆ ಇದು ಸರಿಯಲ್ಲ, ಏಕೆಂದರೆ, ಇಲ್ಲಿ ಅಸ್ಮಿ ಎಂಬುದು ಭಗವದ್ವಾಚಕ.

ದುರ್ಜನರನ್ನು ನಿರಸನಗೊಳಿಸುವುದರಿಂದ ಹಾಗೂ ಜ್ಞಾನರೂಪನಾದ್ದರಿಂದ ಅವನಿಗೆ ಈ ಹೆಸರು. ಅವನನ್ನು ಸರ್ವಂ ಅಂದರೆ ಪೂರ್ಣ ಎಂದು ಉಪಾಸನೆ ಮಾಡಬೇಕು ಎಂದು ಈ ವಾಕ್ಯ ಹೇಳುತ್ತಿದೆಯೇ ಹೊರತು ಐಕ್ಯೋಪಾಸನೆಯನ್ನಲ್ಲ. ಈ ಅರ್ಥಕ್ಕೆ ಪುಷ್ಟಿಯನ್ನು ಕೊಡುವ ಪ್ರಮಾಣವನ್ನು ಆಚಾರ್ಯರು ಉದಾಹರಿಸಿದ್ದಾರೆ.

ಅಸನಾನ್ನಿತಿರೂಪತ್ವಾತ್ ಅಸ್ಮೀತ್ಯುಕ್ತಃ ಪರೋ ಹರಿಃ।
ತಂ ಸರ್ವ ಇತ್ಯುಪಾಸೀತ ಪೂರ್ಣತಾ ಸರ್ವತಾ ಸ್ಮೃತಾ ॥ ಎಂದು.

'ಸರ್ವಮಸ್ಮಿ' ಎಂಬುದಕ್ಕೆ ಮೇಲೆ ಹೇಳಿದ ಅರ್ಥವನ್ನು ಇಟ್ಟುಕೊಳ್ಳದೇ 'ಸರ್ವ ಸ್ವರೂಪನಾಗಿದ್ದೇನೆ' ಎಂಬ ಅರ್ಥವನ್ನು ಇಟ್ಟುಕೊಂಡ ಪಕ್ಷದಲ್ಲಿ ಹಲವಾರು ಅನುಪಪತ್ತಿಗಳನ್ನು ಭಾಷ್ಯದಲ್ಲಿ ತೋರಿಸಲಾಗಿದೆ. 'ಸರ್ವಮಸ್ಮಿ' ಎಂಬ ವಾಕ್ಯವು ಉಪಾಸಕ ಜೀವನಿಗೆ ಬ್ರಹ್ಮೈಕ್ಯವನ್ನು ಹೇಳಿದರೆ ಆಗ ಜೀವಾತ್ಮನಿಗಿಂತ ಭಿನ್ನವಾದ ಬ್ರಹ್ಮನೇ ಇಲ್ಲವೆಂದಾಗುವುದರಿಂದ ಮುಂದೆ ಹೇಳುವ 'ಯಸ್ತದ್ ವೇದ' (ಯಾರು ಅದನ್ನು ತಿಳಿಯುವನೋ) ಎಂಬಲ್ಲಿ ತತ್ ಶಬ್ದವು ಸರಿಹೊಂದುವುದಿಲ್ಲ. ಆಗ 'ತತ್ ವೇದ' ಎನ್ನುವ ಬದಲು 'ಸ್ವಾತ್ಮಾನಂ ವೇದ' ಎಂದು ಎಂದಿರುತ್ತಿತ್ತು. ಹೀಗೆ ಭಾಷ್ಯದಲ್ಲಿ ವಾಕ್ಯಗಳ ಬಗ್ಗೆ ಆಚಾರ್ಯರು ವಿಮರ್ಶಿಸಿದ್ದಾರೆ.

**'ಸ ಏವೇದಂ ಸರ್ವಂ' 'ಆತ್ಮೈವೇದಂ ಸರ್ವಂ' 'ಅಹಮೇವೇದಂ ಸರ್ವಂ' ಎಂಬ ವಾಕ್ಯಗಳೂ ಅಭೇದಪ್ರತಿಪಾದಕಗಳಲ್ಲ**

ಈ ಉಪನಿಷತ್ತಿನ ಏಳನೇ ಅಧ್ಯಾಯದ 24ನೇ ಖಂಡದಲ್ಲಿ ಬರುವ **'ಸ ಏವೇದಂ ಸರ್ವಂ' 'ಅಹಮೇವೇದಂ ಸರ್ವಂ' 'ಆತ್ಮೈವೇದಂ ಸರ್ವಂ'** ಎಂಬ ವಾಕ್ಯಗಳು ಮೇಲುನೋಟಕ್ಕೆ ಅದ್ವೈತ ಪ್ರತಿಪಾದಿಸುವಂತೆ ಭಾಸವಾಗುತ್ತವೆ.

ಆದರೆ ಈ ವಾಕ್ಯಗಳ ಅಭಿಪ್ರಾಯವೇ ಬೇರೆ ಎಂದು ವಿಶ್ವನಿರ್ಣಯದ ಆಧಾರದಿಂದ ಆಚಾರ್ಯರು ಸಮರ್ಥಿಸಿದ್ದಾರೆ.

''ಇದಂ ನಾಮಾತಿಸಾಮೀಪ್ಯಾತ್ ಸರ್ವಂ ಪೂರ್ಣಗುಣತ್ವತಃ।
ಭೂಮಾಹಮಾತ್ಮೇತಿ ಹರಿಃ ತ್ರಿವಿಧೋಽಪಿ ಹಿ ಸರ್ವದಾ ॥''

ಶ್ರೀಹರಿಯ ನಾರಾಯಣ, ಅನಿರುದ್ಧ, ವಾಸುದೇವರೂಪಗಳು ಕ್ರಮವಾಗಿ

ಭೂಮ, ಅಹಂ, ಆತ್ಮ ಎಂಬ ಹೆಸರುಗಳನ್ನು ಪಡೆದಿವೆ. ಇವು ಜೀವಾತ್ಮರಿಗೆ ನಿಯಾಮಕವಾಗಿ ಯಾವಾಗಲೂ ಅತ್ಯಂತ ಸನಿಹದಲ್ಲಿರುವುದರಿಂದ 'ಇದಂ' ಎಂದೂ ಪೂರ್ಣಗುಣಶಾಲಿಯಾದ್ದರಿಂದ ಸರ್ವ ಎಂದೂ ಹೇಳಲ್ಪಡುತ್ತವೆ ಎಂದು 'ವಿಶ್ವ-ನಿರ್ಣಯ' ಎಂಬ ಗ್ರಂಥದಲ್ಲಿ ಹೇಳಲಾಗಿದೆ. ಆದ್ದರಿಂದ ' ಸ ಏವೇದಂ ಸರ್ವಂ' ಮುಂತಾದ ವಾಕ್ಯಗಳು ಅಭೇದಪರವಲ್ಲ.

## ಮನುಷ್ಯನ ಜೀವನವೇ ಒಂದು ಯಜ್ಞ

ಜೀವಾತ್ಮ ತನ್ನನ್ನು ಪರಮಾತ್ಮನ ಪೂಜೆಗಾಗಿರುವ ಯಜ್ಞರೂಪ ಎಂದು ಭಾವಿಸಬೇಕು. ಅವನು ತನ್ನ 116 ವರ್ಷಗಳ ಜೀವನವನ್ನು ಮೂರು ಸವನಗಳೆಂದು ಪರಿಗಣಿಸಬೇಕು. ಮೊದಲ 24ವರ್ಷಗಳನ್ನು ಪ್ರಾತಃ ಸವನ ಎಂದು, ಮಧ್ಯದ 44 ವರ್ಷಗಳನ್ನು ಮಾಧ್ಯಂದಿನ ಸವನ ಎಂದೂ, ಅನಂತರದ 48 ವರ್ಷಗಳನ್ನು ಸಾಯಂ ಸವನ ಎಂದು ಭಾವಿಸಬೇಕು. ಪ್ರಾತಃಸವನದ ಅವಧಿಯಲ್ಲಿ ಬರುವ ಮೃತ್ಯುವನ್ನು ವಸುಗಳೆನಿಸಿದ ಇಂದ್ರಿಯಾಭಿಮಾನಿ ದೇವತೆಗಳನ್ನು ಪ್ರಾರ್ಥಿಸಿ ಪರಿಹರಿಸಿಕೊಳ್ಳ-ಬೇಕು. ಮಾಧ್ಯಂದಿನ ಸವನದ ಅವಧಿಯಲ್ಲಿ ಬರುವ ಮೃತ್ಯುವನ್ನು ರುದ್ರರೆನಿಸಿದ ಇಂದ್ರಿಯಾಭಿಮಾನಿಗಳನ್ನೂ ಪ್ರಾರ್ಥಿಸಿ ಪರಿಹರಿಸಿಕೊಳ್ಳಬೇಕು. ಸಾಯಂಸವನದ ಅವಧಿಯಲ್ಲಿ ಬರುವ ಮೃತ್ಯುವನ್ನು ಆದಿತ್ಯರೆಂಬ ಇಂದ್ರಿಯಾಭಿಮಾನಿಗಳನ್ನು ಪ್ರಾರ್ಥಿಸಿ ಪರಿಹರಿಸಿಕೊಳ್ಳಬೇಕು. ಇತರಾದೇವಿಯ ಮಗನಾದ ಮಹಿದಾಸನು ಪುರುಷಯಜ್ಞೋಪಾಸನೆ ಮಾಡಿ 116 ವರ್ಷ ಬದುಕಿದನು ಎಂದು ಮೂರನೇ ಅಧ್ಯಾಯದ 16ನೇ ಖಂಡದಲ್ಲಿ ವರ್ಣಿತವಾಗಿದೆ.

## ಮಹಿದಾಸ ಐತರೇಯನೆಂದರೆ ಭಗವಂತನಲ್ಲ

ಈ ಪ್ರಸಂಗದಲ್ಲಿ ''ಮಹಿದಾಸ ಐತರೇಯಃ'' ಎಂದರೆ ಯಾರು ? ಐತರೇಯೋಪನಿಷತ್ ಪ್ರತಿಪಾದ್ಯನಾದ ಇತರಾದೇವಿಯ ಮಗನಾದ ಭಗವದ-ವತಾರನಾದ ಮಹಿದಾಸನೋ ? ಅಥವಾ ಬೇರೆಯವರೋ ? ಇದರ ಬಗ್ಗೆ ಅದ್ವೈತ-ವ್ಯಾಖ್ಯಾನಕಾರರಾದ ಆಚಾರ್ಯಶಂಕರರಾಗಲಿ, ವಿಶಿಷ್ಟಾದ್ವೈತವ್ಯಾಖ್ಯಾನಕಾರರಾದ ರಂಗರಾಮಾನುಜರಾಗಲೀ ಸ್ಪಷ್ಟಪಡಿಸಿಲ್ಲ.

ಆದರೆ ಆಚಾರ್ಯ ಮಧ್ವರು ಮಾತ್ರ ಈ ಖಂಡದಲ್ಲಿ ಬಂದಿರುವ ಇತರಾ-

ದೇವಿಯ ಮಗನಾದ ಮಹಿದಾಸ, ಹಾಗೂ 'ತದ್ಧೈತದ್ ಘೋರ ಆಂಗಿರಸಃ ಕೃಷ್ಣಾಯ ದೇವಕೀಪುತ್ರಾಯ' ಎಂಬ ಮುಂದಿನ ಖಂಡದಲ್ಲಿ ಬರುವ ದೇವಕೀ ಪುತ್ರನಾದ ಕೃಷ್ಣನೂ ಬೇರೆ ಬೇರೆ. ಅವರಿಬ್ಬರೂ ಭಗವಂತನ ಅವತಾರರಲ್ಲ. ''ಮಹಿದಾಸೋಽನ್ಯಃ ಕೃಷ್ಣಶ್ಚಾನ್ಯ ಏವ'' ಎಂದು ಭಾಷ್ಯದಲ್ಲಿ ಸ್ಪಷ್ಟಪಡಿಸಿದ್ದಾರೆ.

ಇದಕ್ಕೆ ಆಧಾರವಾಗಿ 'ಕಾಲಕೀಯ' ಎಂಬ ಗ್ರಂಥದ ಕೆಲವೊಂದು ಶ್ಲೋಕಗಳನ್ನು ಉದಾಹರಿಸಿದ್ದಾರೆ. ಅದರ ಸಾರ ಕೆಳಗಿನಂತಿದೆ.

ಇತರಾದೇವಿಯ ಮಗ ಮಹಿದಾಸನೆಂಬ ಋಷಿ ಬೇರೆ ಇನ್ನೊಬ್ಬನಿದ್ದಾನೆ. ಅವನು ಭಗವಂತನ ಅವತಾರನಲ್ಲ. ಅದೇ ರೀತಿ ದೇವಕೀಪುತ್ರನಾದ ಕೃಷ್ಣ ಬೇರೊಬ್ಬನಿದ್ದಾನೆ. ಅವನೂ ಭಗವಂತನ ಅವತಾರನಲ್ಲ. ಹಾಗೆಯೇ ಭಗವಂತನ ಅವತಾರನಲ್ಲದೇ ಇರುವ ಕಪಿಲಮಹರ್ಷಿಯೊಬ್ಬ ಬೇರೆ ಇದ್ದಾನೆ. ಈ ಮೂವರೂ ಬ್ರಹ್ಮದೇವರನ್ನು ಕುರಿತು ಉಗ್ರತಪವನ್ನಾಚರಿಸಿ ತಮಗೂ ತಮ್ಮ ತಾಯಿಗೂ, ಭಗವಂತನ ಹಾಗೂ ಅವನ ತಾಯಿಯ ಹೆಸರೇ ಬರಬೇಕು. ಹಾಗೂ ತಮಗೂ, ತಮ್ಮ ಶಿಷ್ಯ ಪ್ರಶಿಷ್ಯರಿಗೂ ಭಗವಂತನ ಶಿಷ್ಯ ಪ್ರಶಿಷ್ಯರ ಹೆಸರ್ಗೇ ಬರಬೇಕೆಂದು ವರವನ್ನು ಪಡೆದರು. ಆದ್ದರಿಂದ ಈ ಮೂವರಿಗೆ ಭಗವಂತನ ಹೆಸರು, ಅವರ ಶಿಷ್ಯರಿಗೆ ಭಗವಂತನ ಶಿಷ್ಯರ ಹೆಸರುಗಳು ಬಂದಿವೆ.

ಆದ್ದರಿಂದ ಈ ಖಂಡದಲ್ಲಿ ಬಂದಿರುವ ಮಹಿದಾಸ ಒಬ್ಬ ಮನುಷ್ಯ. ಹಾಗೂ ಮುಂದಿನ ಖಂಡದಲ್ಲಿ ಬಂದಿರುವ ದೇವಕೀಪುತ್ರನೂ ಒಬ್ಬ ಮನುಷ್ಯ.

ಭಾಗವತಕ್ಕೆ ಪದರತ್ನಾವಲೀ ಎಂಬ ಟಿಪ್ಪಣಿಯನ್ನು ಬರೆದಿರುವ ವಿಜಯಧ್ವಜ ತೀರ್ಥರು

ಪಂಚಮಃ ಕಪಿಲೋ ನಾಮ ಸಿದ್ಧೇಶಃ ಕಾಲವಿಪ್ಲುತಮ್ ।
ಪ್ರೋವಾಚಾಽಸುರಯೇ ಸಾಂಖ್ಯಂ ತತ್ತ್ವಗ್ರಾಮವಿನಿರ್ಣಯಮ್ ॥

ತೃತೀಯಸ್ಕಂಧ ಅ.3. ಶ್ಲೋಕ 10

ಎಂಬ ಭಾಗವತದ ಶ್ಲೋಕಕ್ಕೆ ವ್ಯಾಖ್ಯಾನಮಾಡುವಾಗ ಇಲ್ಲಿ ಪ್ರಸ್ತುತವಾಗಿರುವ ಕಪಿಲಮಹರ್ಷಿ ಭಗವಂತನ ಅವತಾರ. ಇದಲ್ಲದೇ ಸಾಮಾನ್ಯಜನರ ಮಧ್ಯದಲ್ಲಿ

ಭೂಮ, ಅಹಂ, ಆತ್ಮ ಎಂಬ ಹೆಸರುಗಳನ್ನು ಪಡೆದಿವೆ. ಇವು ಜೀವಾತ್ಮರಿಗೆ ನಿಯಾಮಕವಾಗಿ ಯಾವಾಗಲೂ ಅತ್ಯಂತ ಸನಿಹದಲ್ಲಿರುವುದರಿಂದ 'ಇದಂ' ಎಂದೂ ಪೂರ್ಣಗುಣಶಾಲಿಯಾದ್ದರಿಂದ ಸರ್ವ ಎಂದೂ ಹೇಳಲ್ಪಡುತ್ತವೆ ಎಂದು 'ವಿಶ್ವ-ನಿರ್ಣಯ' ಎಂಬ ಗ್ರಂಥದಲ್ಲಿ ಹೇಳಲಾಗಿದೆ. ಆದ್ದರಿಂದ ' ಸ ಏವೇದಂ ಸರ್ವಂ' ಮುಂತಾದ ವಾಕ್ಯಗಳು ಅಭೇದಪರವಲ್ಲ.

## ಮನುಷ್ಯನ ಜೀವನವೇ ಒಂದು ಯಜ್ಞ

ಜೀವಾತ್ಮ ತನ್ನನ್ನು ಪರಮಾತ್ಮನ ಪೂಜೆಗಾಗಿರುವ ಯಜ್ಞರೂಪ ಎಂದು ಭಾವಿಸಬೇಕು. ಅವನು ತನ್ನ 116 ವರ್ಷಗಳ ಜೀವನವನ್ನು ಮೂರು ಸವನಗಳೆಂದು ಪರಿಗಣಿಸಬೇಕು. ಮೊದಲ 24ವರ್ಷಗಳನ್ನು ಪ್ರಾತಃ ಸವನ ಎಂದು, ಮಧ್ಯದ 44 ವರ್ಷಗಳನ್ನು ಮಾಧ್ಯಂದಿನ ಸವನ ಎಂದೂ, ಅನಂತರದ 48 ವರ್ಷಗಳನ್ನು ಸಾಯಂ ಸವನ ಎಂದು ಭಾವಿಸಬೇಕು. ಪ್ರಾತಃಸವನದ ಅವಧಿಯಲ್ಲಿ ಬರುವ ಮೃತ್ಯುವನ್ನು ವಸುಗಳೆನಿಸಿದ ಇಂದ್ರಿಯಾಭಿಮಾನಿ ದೇವತೆಗಳನ್ನು ಪ್ರಾರ್ಥಿಸಿ ಪರಿಹರಿಸಿಕೊಳ್ಳ-ಬೇಕು. ಮಾಧ್ಯಂದಿನ ಸವನದ ಅವಧಿಯಲ್ಲಿ ಬರುವ ಮೃತ್ಯುವನ್ನು ರುದ್ರರೆನಿಸಿದ ಇಂದ್ರಿಯಾಭಿಮಾನಿಗಳನ್ನೂ ಪ್ರಾರ್ಥಿಸಿ ಪರಿಹರಿಸಿಕೊಳ್ಳಬೇಕು. ಸಾಯಂಸವನದ ಅವಧಿಯಲ್ಲಿ ಬರುವ ಮೃತ್ಯುವನ್ನು ಆದಿತ್ಯರೆಂಬ ಇಂದ್ರಿಯಾಭಿಮಾನಿಗಳನ್ನು ಪ್ರಾರ್ಥಿಸಿ ಪರಿಹರಿಸಿಕೊಳ್ಳಬೇಕು. ಇತರಾದೇವಿಯ ಮಗನಾದ ಮಹಿದಾಸನು ಪುರುಷಯಜ್ಞೋಪಾಸನೆ ಮಾಡಿ 116 ವರ್ಷ ಬದುಕಿದನು ಎಂದು ಮೂರನೇ ಅಧ್ಯಾಯದ 16ನೇ ಖಂಡದಲ್ಲಿ ವರ್ಣಿತವಾಗಿದೆ.

## ಮಹಿದಾಸ ಐತರೇಯನೆಂದರೆ ಭಗವಂತನಲ್ಲ

ಈ ಪ್ರಸಂಗದಲ್ಲಿ ''ಮಹಿದಾಸ ಐತರೇಯಃ'' ಎಂದರೆ ಯಾರು ? ಐತರೇಯೋಪನಿಷತ್ ಪ್ರತಿಪಾದ್ಯನಾದ ಇತರಾದೇವಿಯ ಮಗನಾದ ಭಗವದ-ವತಾರನಾದ ಮಹಿದಾಸನೋ ? ಅಥವಾ ಬೇರೆಯವರೋ ? ಇದರ ಬಗ್ಗೆ ಅದ್ವೈತ-ವ್ಯಾಖ್ಯಾನಕಾರರಾದ ಆಚಾರ್ಯಶಂಕರರಾಗಲಿ, ವಿಶಿಷ್ಟಾದ್ವೈತವ್ಯಾಖ್ಯಾನಕಾರರಾದ ರಂಗರಾಮಾನುಜರಾಗಲೀ ಸ್ಪಷ್ಟಪಡಿಸಿಲ್ಲ.

ಆದರೆ ಆಚಾರ್ಯ ಮಧ್ವರು ಮಾತ್ರ ಈ ಖಂಡದಲ್ಲಿ ಬಂದಿರುವ ಇತರಾ-

ದೇವಿಯ ಮಗನಾದ ಮಹಿದಾಸ, ಹಾಗೂ 'ತದ್ಧೈತದ್ ಘೋರ ಆಂಗಿರಸಃ ಕೃಷ್ಣಾಯ ದೇವಕೀಪುತ್ರಾಯ' ಎಂಬ ಮುಂದಿನ ಖಂಡದಲ್ಲಿ ಬರುವ ದೇವಕೀ ಪುತ್ರನಾದ ಕೃಷ್ಣನೂ ಬೇರೆ ಬೇರೆ. ಅವರಿಬ್ಬರೂ ಭಗವಂತನ ಅವತಾರರಲ್ಲ. ''ಮಹಿದಾಸೋಽನ್ಯಃ ಕೃಷ್ಣಶ್ಚಾನ್ಯ ಏವ'' ಎಂದು ಭಾಷ್ಯದಲ್ಲಿ ಸ್ಪಷ್ಟಪಡಿಸಿದ್ದಾರೆ.

ಇದಕ್ಕೆ ಆಧಾರವಾಗಿ 'ಕಾಲಕೀಯ' ಎಂಬ ಗ್ರಂಥದ ಕೆಲವೊಂದು ಶ್ಲೋಕಗಳನ್ನು ಉದಾಹರಿಸಿದ್ದಾರೆ. ಅದರ ಸಾರ ಕೆಳಗಿನಂತಿದೆ.

ಇತರಾದೇವಿಯ ಮಗ ಮಹಿದಾಸನೆಂಬ ಋಷಿ ಬೇರೆ ಇನ್ನೊಬ್ಬನಿದ್ದಾನೆ. ಅವನು ಭಗವಂತನ ಅವತಾರನಲ್ಲ. ಅದೇ ರೀತಿ ದೇವಕೀಪುತ್ರನಾದ ಕೃಷ್ಣ ಬೇರೊಬ್ಬನಿದ್ದಾನೆ. ಅವನೂ ಭಗವಂತನ ಅವತಾರನಲ್ಲ. ಹಾಗೆಯೇ ಭಗವಂತನ ಅವತಾರನಲ್ಲದೇ ಇರುವ ಕಪಿಲಮಹರ್ಷಿಯೊಬ್ಬ ಬೇರೆ ಇದ್ದಾನೆ. ಈ ಮೂವರೂ ಬ್ರಹ್ಮದೇವರನ್ನು ಕುರಿತು ಉಗ್ರತಪವನ್ನಾಚರಿಸಿ ತಮಗೂ ತಮ್ಮ ತಾಯಿಗೂ, ಭಗವಂತನ ಹಾಗೂ ಅವನ ತಾಯಿಯ ಹೆಸರೇ ಬರಬೇಕು. ಹಾಗೂ ತಮಗೂ, ತಮ್ಮ ಶಿಷ್ಯ ಪ್ರಶಿಷ್ಯರಿಗೂ ಭಗವಂತನ ಶಿಷ್ಯ ಪ್ರಶಿಷ್ಯರ ಹೆಸರ್ಶೇ ಬರಬೇಕೆಂದು ವರವನ್ನು ಪಡೆದರು. ಆದ್ದರಿಂದ ಈ ಮೂವರಿಗೆ ಭಗವಂತನ ಹೆಸರು, ಅವರ ಶಿಷ್ಯರಿಗೆ ಭಗವಂತನ ಶಿಷ್ಯರ ಹೆಸರುಗಳು ಬಂದಿವೆ.

ಆದ್ದರಿಂದ ಈ ಖಂಡದಲ್ಲಿ ಬಂದಿರುವ ಮಹಿದಾಸ ಒಬ್ಬ ಮನುಷ್ಯ. ಹಾಗೂ ಮುಂದಿನ ಖಂಡದಲ್ಲಿ ಬಂದಿರುವ ದೇವಕೀಪುತ್ರನೂ ಒಬ್ಬ ಮನುಷ್ಯ.

ಭಾಗವತಕ್ಕೆ ಪದರತ್ನಾವಲೀ ಎಂಬ ಟಿಪ್ಪಣಿಯನ್ನು ಬರೆದಿರುವ ವಿಜಯಧ್ವಜ ತೀರ್ಥರು

ಪಂಚಮಃ ಕಪಿಲೋ ನಾಮ ಸಿದ್ಧೇಶಃ ಕಾಲವಿಪ್ಲುತಮ್ ।
ಪ್ರೋವಾಚಾಽಸುರಯೇ ಸಾಂಖ್ಯಂ ತತ್ತ್ವಗ್ರಾಮವಿನಿರ್ಣಯಮ್ ॥
ತೃತೀಯಸ್ಕಂಧ ಅ.3. ಶ್ಲೋಕ 10

ಎಂಬ ಭಾಗವತದ ಶ್ಲೋಕಕ್ಕೆ ವ್ಯಾಖ್ಯಾನಮಾಡುವಾಗ ಇಲ್ಲಿ ಪ್ರಸ್ತುತವಾಗಿರುವ ಕಪಿಲಮಹರ್ಷಿ ಭಗವಂತನ ಅವತಾರ. ಇದಲ್ಲದೇ ಸಾಮಾನ್ಯಜನರ ಮಧ್ಯದಲ್ಲಿ

ಜನಪ್ರಿಯವಾದ ಸಾಂಖ್ಯಶಾಸ್ತ್ರಪ್ರಣೇತಾರನಾದ ಕಪಿಲಮಹರ್ಷಿಯೂ ಅವನ ಶಿಷ್ಯ ಆಸುರಿಯೂ ಬೇರೆಯೇ ಎಂದು ಸಜ್ಜನರ ಸಂಪ್ರದಾಯ ಎಂದು ಆಚಾರ್ಯರ ಅಭಿಪ್ರಾಯವನ್ನೇ ಎತ್ತಿಹಿಡಿದಿರುವರು [1].

**ಕೋಶದ ಹಿನ್ನೆಲೆಯಲ್ಲಿ ಕೀರ್ತಿ, ಯಶಃ ಪದಗಳ ಅರ್ಥವ್ಯತ್ಯಾಸ ನಿರೂಪಣೆ :**

ಇದಲ್ಲದೇ ಕೆಲವೆಡೆ ಆಚಾರ್ಯರು ಅಪರೂಪದ ಕೋಶವನ್ನುಲ್ಲೇಖಿಸಿ ಉಪನಿಷತ್ತಿನ ಪದಗಳಿಗೆ ಸುಂದರವಾದ ಅರ್ಥವನ್ನು ಹೇಳಿ ಓದುಗರಿಗೆ ಉಂಟಾಗುವ ಗೊಂದಲವನ್ನು ಪರಿಹರಿಸುತ್ತಾರೆ.

ಉದಾಹರಣೆಗೆ 3ನೇ ಅಧ್ಯಾಯದಲ್ಲಿ 13ನೇ ಖಂಡದ 'ಅಥ ಯೋऽಸ್ಯ ದಕ್ಷಿಣಃ ಸುಷಿಃ' ಎಂಬ 2ನೇ ಮಂತ್ರದಲ್ಲಿಯ 'ಯಶಃ' ಪದಕ್ಕೂ ಹಾಗೆಯೇ ಅದೇ ಖಂಡದ 4ನೇ ಮಂತ್ರದಲ್ಲಿಯ 'ಕೀರ್ತಿ' ಪದಕ್ಕೂ ಒಂದೇ ಅರ್ಥ ಎಂಬುದು ನಮ್ಮ ಅನಿಸಿಕೆ. ಆದ್ದರಿಂದ ಇಲ್ಲಿ ಪುನರುಕ್ತಿ ಕಂಡುಬರುವುದು ಸಹಜ. ಆದರೆ ಆಚಾರ್ಯರು 'ದಿಕ್ಷು ಯಾನಾದ್ ಯಶೋ ವ್ಯಾಪ್ತಂ ಕೀರ್ತಿಃ ಪ್ರತ್ಯಕ್ಷತಃ ಸ್ತುತಿಃ' ಎಂಬ ಶಬ್ದನಿರ್ಣಯವನ್ನು ಉದಾಹರಿಸಿ ಯಶಸ್ಸೆಂದರೆ ಎಲ್ಲ ದಿಕ್ಕುಗಳಲ್ಲಿ ಪಸರಿಸುವಂತಹದು. ಕೀರ್ತಿ ಎಂದರೆ ಪ್ರತ್ಯಕ್ಷತಃ ಸ್ತುತಿಃ ಎಂದು ಪುನರುಕ್ತಿಯನ್ನು ಪರಿಹರಿಸಿದ್ದಾರೆ.

ಆದರೆ ಇತರರು ಇಲ್ಲಿ ಯಶಸ್ಸೆಂದರೆ ಖ್ಯಾತಿ ಎಂದೂ, ಆತ್ಮಪರೋಕ್ಷಂ ವಿಶ್ರುತತ್ವಂ ಕೀರ್ತಿಃ' ಎಂದೂ ವ್ಯಾಖ್ಯಾನಿಸಿದ್ದಾರೆ. (ಶಾಂ. ಭಾ. ಪು.425 ಅ.3.ಖಂ 13)

**ಏಕಮೇವಾದ್ವಿತೀಯಂ ಬ್ರಹ್ಮ ಎಂಬ ವಾಕ್ಯವು ಅದ್ವೈತಪರವೇ?**

6ನೇ ಅಧ್ಯಾಯದ ಒಂದನೇ ಖಂಡದಲ್ಲಿ ಬರುವ ಈ ವಾಕ್ಯಕ್ಕೆ ಅದ್ವೈತಿಗಳು ಅದ್ವೈತಪರವಾಗಿ ಹೀಗೆ ವ್ಯಾಖ್ಯಾನಿಸುತ್ತಾರೆ.

---

1. ಅತ್ರಾಜ್ಞಲೋಕಪ್ರಸಿದ್ಧಸಾಂಖ್ಯಶಾಸ್ತ್ರಪ್ರಣೇತಾ ಕಪಿಲಃ, ತಚ್ಛಿಷ್ಯಃ ಆಸುರಿಶ್ಚಾನ್ಯ ಏವೇತಿ ಸತಾಂ ಸಂಪ್ರದಾಯಃ। (ವಿಜಯಧ್ವಜೀಯ ಭಾಗವತವ್ಯಾಖ್ಯಾ 3-3-10)

ಒಂದು ವಸ್ತುವು ಮೂರು ಬಗೆಯ ಭೇದವನ್ನು ಹೊಂದಿರುತ್ತದೆ. ಉದಾಹರಣೆಗೆ ಮರವು ತನ್ನಲ್ಲಿರುವ ಹೂವು ಹಣ್ಣು ಎಲೆಗಳಿಗಿಂತ ಭಿನ್ನವಾಗಿದೆ. ಇದನ್ನು ಸ್ವಗತಭೇದ ಎನ್ನುವರು. ಅದೇ ರೀತಿ ಮರವು ಇತರ ಮರಗಳಿಗಿಂತ ಭಿನ್ನವಾಗಿದೆ ಇದನ್ನು ಸಜಾತೀಯಭೇದ ಎನ್ನುವರು. ಹಾಗೆಯೇ ಮರವು ತನಗಿಂತ ವಿಜಾತೀಯವಾದ ಕಲ್ಲು ಮುಳ್ಳು ಮುಂತಾದವುಗಳಿಗಿಂತ ಭಿನ್ನವಾಗಿದೆ. ಇದನ್ನು ವಿಜಾತೀಯ ಭೇದ ಎನ್ನುವರು. ಹೀಗೆ ಪರಬ್ರಹ್ಮನಲ್ಲಿ ಮೂರುವಿಧ ಭೇದಗಳಿಗೆ ಪ್ರಸಕ್ತಿ ಉಂಟು. ಈ ಮೂರುವಿಧ ಭೇದವನ್ನು ನಿಷೇಧಿಸುವುದಕ್ಕಾಗಿ 'ಏಕಮೇವಾದ್ವಿತೀಯಂ' ಎಂಬ ವಾಕ್ಯ ಹೊರಟಿದೆ. ಇಲ್ಲಿ 'ಏಕಂ' ಎಂಬ ಶಬ್ದವು ಸ್ವಗತಭೇವನ್ನು 'ಏವ'ಶಬ್ದವು ಸಜಾತೀಯಭೇದವನ್ನೂ 'ಅದ್ವಿತೀಯಂ' ಎಂಬ ಶಬ್ದವು ವಿಜಾತೀಯ ಭೇದವನ್ನೂ ಅಲ್ಲಗಳೆಯುತ್ತದೆ. ಒಟ್ಟಾರೆ ಪರಬ್ರಹ್ಮ ನಿರ್ಗುಣ. ಅವನಿಗಿಂತ ಬೇರೆಯಾದ ಸಜಾತೀಯವಸ್ತುವಾಗಲೀ ವಿಜಾತೀಯ ವಸ್ತುವಾಗಲೀ ಇಲ್ಲ ಎಂಬುದು ಈ ವಾಕ್ಯದ ತಾತ್ಪರ್ಯ ಎಂದು ಅದ್ವೈತಿಗಳ ಅಭಿಪ್ರಾಯ.

'ನಚ ವಿಜಾತೀಯಭೇದವರ್ಜನಂ ನಾಮ ಕುತ್ರಚಿತ್ ಪ್ರಸಿದ್ಧಮ್ । ತತ್ಪ್ರಮಾಣಾಭಾವಾಚ್ಚ ।' ಎಂಬುದಾಗಿ ಆಚಾರ್ಯರು ಇದನ್ನು ನಿರಾಕರಿಸಿದ್ದಾರೆ. 'ಅದ್ವಿತೀಯ'ಶಬ್ದಕ್ಕೆ ವಿಜಾತೀಯ ಭೇದರಹಿತ ಎಂಬರ್ಥವೇ ಇಲ್ಲಿ ಸರಿಹೋಗ-ಲಾರದು. ಒಂದು ವಸ್ತು ಇನ್ನೊಂದು ವಸ್ತುವಿಗಿಂತ ವಿಜಾತೀಯ ಎಂದ ಮೇಲೆ ಆ ವಸ್ತು ಇನ್ನೊಂದು ವಸ್ತುವಿಗಿಂತ ಭಿನ್ನ (ಭೇದವುಳ್ಳದ್ದು) ಎಂದೇ ಸಿದ್ಧವಾಗುವುದರಿಂದ ಭೇದರಾಹಿತ್ಯವು ಬರಲು ಸಾಧ್ಯವೇ ಇಲ್ಲ. ಆದ್ದರಿಂದ ವಿಜಾತೀಯ ಭೇದರಾಹಿತ್ಯವೇ ಅಪ್ರಾಮಾಣಿಕ ಎಂಬುದನ್ನು ಸೊಗಸಾಗಿ ಸಮರ್ಥಿಸಿರುವರಲ್ಲದೇ ಆ ವಾಕ್ಯಕ್ಕೆ ಸುಂದರ ಪ್ರಾಮಾಣಿಕವಾದ ಅರ್ಥವನ್ನು ಕೆಳಕಂಡಂತೆ ಬಣ್ಣಿಸಿದ್ದಾರೆ.

'ಏಕಮೇವಾದ್ವಿತೀಯಂ ಬ್ರಹ್ಮ' ಎಂಬ ವಾಕ್ಯದಲ್ಲಿ 'ಏಕಂ' ಶಬ್ದದಿಂದ ಭಗವಂತನಿಗೂ ಅವನ ಅವಯವ ಗುಣಕ್ರಿಯಾದಿಗಳಿಗೂ ಭೇದವಿಲ್ಲವೆಂದೂ, ಅವಧಾರಣಾರ್ಥಕವಾದ ಏವಶಬ್ದದಿಂದ ಭೇದಾಭೇದವೂ ಕೂಡ ಇಲ್ಲವೆಂದೂ ಪ್ರತ್ಯುತ ಅಭೇದವೊಂದೇ ಇರುವುದೆಂದು ಹೇಳಲ್ಪಡುತ್ತಿದೆ. ಅದ್ವಿತೀಯಶಬ್ದದಿಂದ ಭಗವಂತನಿಗೆ ಸಮನಾದ ವ್ಯಕ್ತಿಯಾಗಲೀ ಉತ್ತಮನಾದ ವ್ಯಕ್ತಿಯಾಗಲೀ ಇಲ್ಲವೆಂದು ಹೇಳಲ್ಪಡುತ್ತಿದೆ. ಈ ವಿಷಯಕ್ಕೆ ಆಧಾರವಾಗಿ ''ಏಕಮೇವಾದ್ವಿತೀಯಂ ತತ್

**ಸಮಾಭ್ಯಧಿಕವರ್ಜನಾತ್''** ಎಂಬ 'ಪ್ರವೃತ್ತ' ಗ್ರಂಥದ ಶ್ಲೋಕಗಳನ್ನೂ ಸಾಮ-ಸಂಹಿತೆಯ ಶ್ಲೋಕಗಳನ್ನೂ ಉದಾಹರಿಸಿ ಆಚಾರ್ಯರು ತಮಗಿರುವ ಪ್ರಮಾಣಬದ್ಧತೆಯನ್ನು ಪ್ರದರ್ಶಿಸಿದ್ದಾರೆ.

**ತತ್ತ್ವಮಸಿ ?**

ಈ ಉಪನಿಷತ್ತಿನ 6ನೇ ಅಧ್ಯಾಯದ 8ನೇ ಖಂಡದಲ್ಲಿ ಕಂಡುಬರುವ ಈ ವಾಕ್ಯವನ್ನು ಅದ್ವೈತಿಗಳು ಪಂಚಮಹಾವಾಕ್ಯಗಳಲ್ಲಿ ಒಂದೆಂದು ಪರಿಗಣಿಸುವರು. ಈ ವಾಕ್ಯ ಹಾಗೂ 'ಅಹಂ ಬ್ರಹ್ಮಾಸ್ಮಿ ' ''ಸರ್ವ ಖಲ್ವಿದಂ ಬ್ರಹ್ಮ '' ''ನೇಹ ನಾನಾಸ್ತಿ ಕಿಂಚನ'' ಇತ್ಯಾದಿ ಇತರ ನಾಲ್ಕು ವಾಕ್ಯಗಳನ್ನು ಹಿನ್ನೆಲೆಯಾಗಿ ಇಟ್ಟುಕೊಂಡು ಸಮಗ್ರ ವೈದಿಕವಾಙ್ಮಯವು ಅಭೇದಪರವಾಗಿದೆ ಎಂದರ್ಥೈಸುವರು. ಆಚಾರ್ಯರು ತಮ್ಮ ಛಾಂದೋಗ್ಯೋಪನಿಷದ್ ಭಾಷ್ಯದಲ್ಲಿ '' ಸ ಆತ್ಮಾ ಅತತ್ ತ್ವಮಸಿ ಶ್ವೇತಕೇತೋ '' ಎಂದು ಪದಚ್ಛೇದ ಮಾಡಿ ಈ ವಾಕ್ಯವೂ ಭೇದಪರವೇ ಎಂದು ಸೂಕ್ತಯುಕ್ತಿಗಳಿಂದ ಸಮರ್ಥಿಸಿದ್ದಾರೆ. ಇಲ್ಲಿ ವಾಸ್ತವಿಕವಾಗಿ 'ತತ್ ತ್ವಮಸಿ' ಎಂದೂ ''ಅತತ್ ತ್ವಮಸಿ '' ಎಂದೂ ಪದಚ್ಛೇದ ಮಾಡಬಹುದು. ಆದರೆ ಅದಕ್ಕೆ ಪೂರ್ವಾಪರಗಳ ವಿರೋಧ ಬರಬಾರದು. ಪ್ರಕೃತ ಇಲ್ಲಿ 'ತತ್ ತ್ವಮಸಿ' ಎಂದು ಪದವಿಭಾಗಮಾಡಿದರೆ ಪೂರ್ವಾಪರವಿರೋಧ ಬರುವದು. ಇದನ್ನೇ ಆಚಾರ್ಯರು ಹೀಗೆ ನಿರೂಪಿಸಿದ್ದಾರೆ.

ತನ್ನಿಷ್ಠಾ ಹಿ ಪ್ರಜಾ ಯಸ್ಮಾತ್ ತತ್ಪ್ರತಿಷ್ಠಾಶ್ಚ ಮೋಕ್ಷಗಾಃ।
ತನ್ಮೂಲಾಶ್ಚ ಯತಸ್ತಾಸಾಂ ತದ್ಭಾವಃ ಕುತ ಏವ ತು ॥

ಜೀವಾತ್ಮರೆಲ್ಲರೂ ಪರಮಾತ್ಮನನ್ನು ಆಶ್ರಯಿಸಿರುವದರಿಂದಲೂ ಮೋಕ್ಷದಲ್ಲೂ ಪರಮಾತ್ಮನನ್ನೇ ಸ್ಥಿರವಾಗಿ ಆಶ್ರಯಿಸುವದರಿಂದಲೂ ಪರಮಾತ್ಮನಿಂದಲೇ ಅವರು ಜನಿಸುವದರಿಂದಲೂ ಅವರು ಹೇಗೆತಾನೆ ಪರಮಾತ್ಮನಾಗಬಲ್ಲರು ?

'ಸ ಆತ್ಮಾ ತತ್ವಮಸಿ ' ಎಂಬುದಕ್ಕಿಂತ ಮೊದಲು 'ಸನ್ಮೂಲಾಃ' ''ಸದಾಯ-ತನಾಃ 'ಸತ್ಪ್ರತಿಷ್ಠಾಃ' ಎಂದು ಹೇಳಿರುವದರಿಂದ ಈ ವಾಕ್ಯಕ್ಕೆ ಅಭೇದದಪರವಾಗಿ ಅರ್ಥಮಾಡಿದಲ್ಲಿ ಉಪಕ್ರಮ ವಿರೋಧ ಬರುವದೆಂದು ಆಚಾರ್ಯರ ಮೇಲಿನ ಶ್ಲೋಕದಿಂದ ವ್ಯಕ್ತವಾಗುವದು.

ಈ ಪ್ರಕರಣದಲ್ಲಿ ಬಂದಿರುವ ಒಂಭತ್ತು ದೃಷ್ಟಾಂತಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ ನೋಡಿದಾಗ ಈ ವಾಕ್ಯವು ಜೀವಬ್ರಹ್ಮರ ಅಭೇದವನ್ನು ಪ್ರತಿಪಾದಿಸಲು ಸಾಧ್ಯವೇ ಇಲ್ಲ ಎಂದು ಸ್ಪುಟವಾಗುತ್ತದೆ. ಇಲ್ಲಿ ಉದಾಹರಿಸಿರುವ ಒಂಭತ್ತು ದೃಷ್ಟಾಂತಗಳಲ್ಲಿ ಜೀವ ಪರಮಾತ್ಮರನ್ನು 1) ಪಕ್ಷಿ ಮತ್ತು ಅದಕ್ಕೆ ಕಟ್ಟಿದ ಹಗ್ಗ 2) ಬೇರೆ ಬೇರೆ ಹಣ್ಣಿನರಸಗಳು 3) ಹೊಳೆ ಮತ್ತು ಕಡಲು 4) ಮರ ಮತ್ತು ಅದನ್ನು ಬದುಕಿಸುವ ಚೇತನ 5) ಸೂಕ್ಷ್ಮ ಬೀಜ ಮತ್ತು ಅದರೊಳಗಿನ ಅದೃಶ್ಯ ಶಕ್ತಿ 6) ನೀರು ಮತ್ತು ಉಪ್ಪು 7) ಯಾತ್ರಿಕ ಮತ್ತು ಅವನು ತಲುಪುವ ದೇಶ 8) ರೋಗಿ ಮತ್ತು ಅವನ ಪ್ರಾಣವನ್ನು ನಿಯಂತ್ರಿಸುವ ಪರದೇವತೆ 9) ಕಳ್ಳ ಮತ್ತು ಅಪಹರಿಸಿದ ವಸ್ತು . ಇವುಗಳಿಗೆ ಹೋಲಿಸಲಾಗಿದೆ. ಆದರೆ ಈ ಎಲ್ಲ ವಸ್ತುಗಳಿಗೆ ಭೇದವೇ ನಮ್ಮ ಅನುಭವ ಸಿದ್ಧವಾಗಿರುವದರಿಂದ ಈ ದೃಷ್ಟಾಂತಗಳನ್ನಿಟ್ಟುಕೊಂಡು ಮೇಲಿನ ವಾಕ್ಯಕ್ಕೆ ಅಭೇದ-ಪರವಾಗಿ ವ್ಯಾಖ್ಯಾನಿಸುವದು ಸಮಂಜಸವೆನಿಸದು. ಗುರುಕುಲದಲ್ಲಿ ಅಧ್ಯಯನ ಮಾಡಿ ದುರಹಂಕಾರಿಯಾಗಿ ಬಂದಿದ್ದ ಶ್ವೇತಕೇತುವಿಗೆ ''ತತ್ ತ್ವಮಸಿ'' 'ಆ ಬ್ರಹ್ಮನೇ ನೀನಾಗಿದ್ದಿ'ಎಂದು ಉದ್ದಾಲಕರು ಉಪದೇಶ ಮಾಡಿದರು ಎನ್ನುವದು ಈ ಪ್ರಕರಣದಲ್ಲಿ ಸರಿಯನಿಸದು. ಹೀಗೆ ಈ ವಾಕ್ಯವು ಭೇದ ಪರವಲ್ಲ ಎಂದು ಹಲವಾರು ಪೂರಕ ಪ್ರಮಾಣಗಳಿಂದ ಸಮರ್ಥಿಸಿದ್ದಾರೆ.

ಹೀಗೆ ಮೇಲುನೋಟಕ್ಕೆ ಅಭೇದವನ್ನು ಪ್ರತಿಪಾದಿಸುವಂತೆ ತೋರುವ ಅನೇಕ ವಾಕ್ಯಗಳ ಪೂರ್ವಾಪರಗಳನ್ನು ಸೂಕ್ಷ್ಮವಾಗಿ ವೀಕ್ಷಿಸಿ ವಿಶ್ಲೇಷಿಸಿ ಅವು ಭೇದಪರಗಳೇ ಆಗಿವೆ ಎಂದು ಸೂಕ್ತ ಯುಕ್ತಿಗಳಿಂದ ಸಮರ್ಥಿಸಿರುವುದನ್ನು ಗ್ರಂಥದಲ್ಲಿ ಅಲ್ಲಲ್ಲಿ ಕಾಣಬಹುದಾಗಿದೆ.

### ಕಪ್ಯಾಸಂ ಎಂಬ ಶಬ್ದದ ಸೊಗಸಾದ ಅರ್ಥನಿರೂಪಣೆ

'ತಸ್ಯ ಯಥಾ ಕಪ್ಯಾಸಂ ಪುಂಡರೀಕಂ ಏವಮಕ್ಷಿಣೀ' ಎಂಬ ವಾಕ್ಯದಲ್ಲಿ ಬರುವ ಕಪ್ಯಾಸಶಬ್ದಕ್ಕೆ ಆಚಾರ್ಯರು ಹೇಳುವ ಅರ್ಥ ಅತ್ಯಪೂರ್ವವಾಗಿದೆ. ಈ ಶಬ್ದಕ್ಕೆ 'ಕಪಿಪೃಷ್ಠ' ಎಂದು ಅರ್ಥಹೇಳಿ ಭಗವಂತನ ಕಣ್ಣುಗಳು ಕಪಿಪೃಷ್ಠದಂತೆ ಕೆಂಪಾಗಿವೆ ಎಂದು ಇತರರು ವ್ಯಾಖ್ಯಾನಿಸಿದ್ದರೆ, ಆಚಾರ್ಯರು ಸಂಸ್ಕೃತದಲ್ಲಿ 'ಕ' ಶಬ್ದಕ್ಕೆ ನೀರು ಎಂದು ಅರ್ಥವಿರುವುದರಿಂದ ನೀರನ್ನು ಪಿ ಪಾನಮಾಡುವ ನಾಳದಲ್ಲಿ ಆಸಂ ಇರುವ ಕಮಲದಂತೆ ಅರಳಿದ ಕಂಗಳುಳ್ಳವನೆಂದು ಸುಂದರವಾದ ಅರ್ಥವನ್ನು ಹೇಳಿದ್ದಾರೆ.

ನಾಳವು ನೀರಿನಿಂದ ಬೇರ್ಪಟ್ಟಾಗ ಕಮಲ ಬಾಡುವುದು. ಆದ್ದರಿಂದ ಈ ರೀತಿಯಾಗಿ ಅರ್ಥವನ್ನು ಹೇಳಿರುವುದು ಪ್ರಕೃತಕ್ಕೆ ಅತ್ಯಂತ ಸಮುಚಿತವಾಗಿದೆ. ಈ ರೀತಿಯ ಹಲವಾರು ಅಪರೂಪದ ವಿಷಯಗಳು ಈ ಗ್ರಂಥದ ಉದ್ದಗಲಕ್ಕೂ ವ್ಯಾಪಿಸಿವೆ.

ಆಚಾರ್ಯರ ಛಾಂದೋಗ್ಯೋಪನಿಷದ್ಭಾಷ್ಯಕ್ಕೆ ವ್ಯಾಸತೀರ್ಥರು, ಅನಂತ-ಭಟ್ಟರು ಹಾಗೂ ವೇದೇಶತೀರ್ಥರ ಟೀಕೆಗಳು ಉಪಲಬ್ಧವಾಗಿವೆ.

## ಶ್ರೀವೇದೇಶತೀರ್ಥರು

ಶ್ರೀವೇದೇಶತೀರ್ಥರು ಕ್ರಿ.ಶ. 1570-1620ರ ನಡುವಿನ ಅವಧಿಯಲ್ಲಿ ಜೀವಿಸಿದ್ದರು. ಭೀಮಾನದಿಯ ತೀರದ ಪಾವನ ಕ್ಷೇತ್ರವಾದ ಮಣ್ಣೂರು ಇವರ ಕಾರ್ಯಕ್ಷೇತ್ರವಾಗಿತ್ತು. ಧ್ರುವಕರಾರ್ಚಿತ ಚೆನ್ನಕೇಶವನ ಈ ದಿವ್ಯಸನ್ನಿಧಾನದಲ್ಲಿಯೇ ತಮ್ಮ ಜೀವನದ ಬಹು ಭಾಗವನ್ನು ಕಳೆದರು. ಇವರ ವೈಯುಕ್ತಿಕ ಜೀವನ ಬಗ್ಗೆಯಾಗಲಿ ಇವರ ತಂದೆ ತಾಯಿಗಳ ಬಗ್ಗೆಯಾಗಲಿ ಹೆಚ್ಚಿನ ವಿವರಗಳು ದೊರಕು-ವುದಿಲ್ಲ. ಈ ಬಗ್ಗೆ ಸಂಶೋಧನೆ ನಡೆಯಬೇಕಿದೆ.

### ವೇದೇಶತೀರ್ಥರ ಪೂರ್ವವೃತ್ತಾಂತ

ಈಗ ಲಭ್ಯವಿರುವ ಮಾಹಿತಿಗಳ ಪ್ರಕಾರ ಇವರು ಚಿನ್ನ ಮುತ್ತು ರತ್ನಗಳ ವ್ಯಾಪಾರಮಾಡುವ ಚಿನಿವಾರರ ಮನೆತನಕ್ಕೆ ಸೇರಿದವರು. ಆ ಮನೆತನದ ಕಿರಿಯ-ರಾಗಿದ್ದ ಇವರ ಹೆಸರು ಭಾಗಪ್ಪಯ್ಯ. ಸುಸಂಸ್ಕೃತ ನಡವಳಿಕೆಯನ್ನು ರೂಢಿಸಿಕೊಂಡಿದ್ದ ಇವರಿಗೆ ಕೃಷ್ಣಪ್ಪಯ್ಯ ಯಾದಪ್ಪಯ್ಯರೆಂಬ ಇಬ್ಬರು ತಮ್ಮಂದಿರು. ಈ ಮೂವರೂ ಒಟ್ಟಿಗೇ ಇರುತ್ತಿದ್ದರು. ಇವರದು ಅವಿಭಕ್ತ ಕುಟುಂಬ. ತಮ್ಮ ಯಾದಪ್ಪಯ್ಯ ಬಂಗಾರದ ವ್ಯಾಪಾರಕ್ಕಾಗಿ ಪಟ್ಟಣಕ್ಕೆ ಹೋಗಿ ಬಂದು ಮಾಡುತ್ತಿದ್ದ. ಇನ್ನೊಬ್ಬ ತಮ್ಮ ಹೊಲ ಮನೆಗಳನ್ನು ನೋಡಿಕೊಳ್ಳುತ್ತಿದ್ದ.

ಭಾಗಪ್ಪಯ್ಯನವರು ಮನೆಯ ಯಜಮಾನರಾಗಿ ಮನೆಯ ಆಗುಹೋಗುಗಳ ಬಗ್ಗೆ ನಿಗಾ ಇಟ್ಟಿದ್ದರು. ಹೀಗೆ ಇವರ ಸಂಸಾರ ಕಂಸಾರಿಯ ದಯೆಯಿಂದ ಬಹಳ ಸುಖಮಯವಾಗಿತ್ತು.

ಸ್ವಲ್ಪದಿವಸಗಳ ಕಳೆಯುವದರೊಳಗೇ ಭಾಗಪ್ಪಯ್ಯನವರು. ತಮ್ಮ ತಮ್ಮಂದಿರ

ವಿವಾಹವನ್ನು ತಾವೇ ಮುಂದೆ ನಿಂತು ಅದ್ದೂರಿಯಾಗಿ ಮಾಡಿದರು. ಊರಿಗೆ ಭಾರೀ ಶ್ರೀಮಂತರಾದ್ದರಿಂದ ಅವರಿಗೆ ಯಾವುದಕ್ಕೂ ಕೊರತೆ ಇರಲಿಲ್ಲ. ನಂತರ ಅವರೆಲ್ಲರೊಡನೆ ಆನಂದದಿಂದ ಜೀವನ ಸಾಗಿಸುತ್ತಿದ್ದರು. ಈ ನಡುವೆ ಕೃಷ್ಣಪ್ಪನಿಗೆ ಗಂಡುಮಗುವೊಂದು ಜನಿಸಿತು. ತೇಜಸ್ವಿಯೂ ಸ್ಫುರದ್ರೂಪಿಯೂ ಆದ ಆ ಮಗುವಿಗೆ ಜಾತಕರ್ಮಾದಿ ಸಂಸ್ಕಾರವನ್ನು ನಿರ್ವಹಿಸಿ ''ಶ್ರೀನಿವಾಸ''ನೆಂದು ನಾಮಕರಣ ಮಾಡಿದ್ದರು. ಇವರೇ ಮುಂದೆ ''ಶ್ರೀನಿವಾಸತೀರ್ಥರು'' ಎಂಬ ಪ್ರಸಿದ್ಧ ಟಿಪ್ಪಣಿಕಾರರಾದರು.

ಮುಂದೆ ಕೆಲವುದಿನಗಳಲ್ಲಿಯೇ ವಿಧಿಯ ವಕ್ರದೃಷ್ಟಿಯಿಂದಾಗಿ ಕೃಷ್ಣಪ್ಪನವರ ಆರೋಗ್ಯ ಹದಗೆಟ್ಟಿತು. ಬಗೆಬಗೆಯ ಔಷಧೋಪಚಾರಗಳು ನಡೆದರೂ ಅವರ ರೋಗ ವಾಸಿಯಾಗಲಿಲ್ಲ. ಕೊನೆಗೊಂದು ದಿನ ರೋಗದಿಂದ ಜರ್ಝರಿತರಾಗಿ ದೇಹತ್ಯಾಗ ಮಾಡಿದರು. ಕೆಲವುದಿನಗಳ ಹಿಂದೆ ಅವರ ಮನೆಯಲ್ಲಿ ಇದ್ದ ಸಂಭ್ರಮದ ವಾತಾವರಣ ಮಾಯವಾಗಿ ದುಃಖದ ವಾತಾವರಣ ಏರ್ಪಟ್ಟಿತು. ತಮ್ಮ ಬಲ-ಭುಜದಂತಿದ್ದ ತಮ್ಮನನ್ನು ಕಳೆದುಕೊಂಡದ್ದು ಅವರಿಗೆ ಬರಸಿಡಿಲು ಬಡಿದಂತಾಯಿತು. ಈ ಘಟನೆ ಅವರ ಜೀವನ ದಿಕ್ಕನ್ನೇ ಬದಲಿಸಿತು. ಈ ಅಸಾರ-ವಾದ ಸಂಸಾರದ ಕ್ಷಣಭಂಗುರತೆಯನ್ನರಿತ ಅವರ ಚಿತ್ತ ಭಗವಂತನತ್ತ ವಾಲಲಾ-ರಂಭಿಸಿತು. ಹರಿಯ ಕರುಣೆಯನ್ನು ಪಡೆಯುವದೇ ಜೀವನದ ಚರಮ ಪರಮ ಗುರಿ ಎಂದು ಭಾವಿಸಿದರು. ತಮ್ಮ ಮನೆಯ ಸಮಸ್ತ ಹೊಣೆಗಾರಿಕೆಯನ್ನೂ ಇನ್ನೊಬ್ಬ ತಮ್ಮ ಯಾದಪ್ಪನಿಗೆ ವಹಿಸಿ ವೈರಾಗ್ಯವನ್ನು ತಾಳಿ ಉತ್ತರಾದಿಮಠಾಧೀಶರಾದ ಮಹಾಮಹಿಮರಾದ ''ಶ್ರೀರಘೂತ್ತಮತೀರ್ಥರಿಗೆ'' ಶರಣುಬಂದರು. ತಮ್ಮನ್ನು ಶಿಷ್ಯರನ್ನಾಗಿ ಸ್ವೀಕರಿಸಿ ಉದ್ಧರಿಸಬೇಕೆಂದು ವಿನಂತಿಸಿಕೊಂಡರು.

### ಶ್ರೀರಘೂತ್ತಮರಿಂದ ಆಶ್ರಮ ಸ್ವೀಕಾರ

ಮಹಾತಪಸ್ವಿಗಳೂ, ವಿರಕ್ತಶಿಖಾಮಣಿಗಳೂ ಆದ ಶ್ರೀರಘೂತ್ತಮತೀರ್ಥ ಶ್ರೀಪಾದರು ಅವರ ಯೋಗ್ಯತೆಯನ್ನು ತಿಳಿದು ಅವರಿಗೆ ಆಶ್ರಮವನ್ನಿತ್ತು 'ಶ್ರೀವೇದೇಶತೀರ್ಥರು' ಎಂದು ನಾಮಕರಣ ಮಾಡಿದರು.

ನಾಳವು ನೀರಿನಿಂದ ಬೇರ್ಪಟ್ಟಾಗ ಕಮಲ ಬಾಡುವುದು. ಆದ್ದರಿಂದ ಈ ರೀತಿಯಾಗಿ ಅರ್ಥವನ್ನು ಹೇಳಿರುವುದು ಪ್ರಕೃತಕ್ಕೆ ಅತ್ಯಂತ ಸಮುಚಿತವಾಗಿದೆ. ಈ ರೀತಿಯ ಹಲವಾರು ಅಪರೂಪದ ವಿಷಯಗಳು ಈ ಗ್ರಂಥದ ಉದ್ದಗಲಕ್ಕೂ ವ್ಯಾಪಿಸಿವೆ.

ಆಚಾರ್ಯರ ಛಾಂದೋಗ್ಯೋಪನಿಷದ್ಭಾಷ್ಯಕ್ಕೆ ವ್ಯಾಸತೀರ್ಥರು, ಅನಂತ-ಭಟ್ಟರು ಹಾಗೂ ವೇದೇಶತೀರ್ಥರ ಟೀಕೆಗಳು ಉಪಲಬ್ಧವಾಗಿವೆ.

## ಶ್ರೀವೇದೇಶತೀರ್ಥರು

ಶ್ರೀವೇದೇಶತೀರ್ಥರು ಕ್ರಿ.ಶ. 1570-1620ರ ನಡುವಿನ ಅವಧಿಯಲ್ಲಿ ಜೀವಿಸಿದ್ದರು. ಭೀಮಾನದಿಯ ತೀರದ ಪಾವನ ಕ್ಷೇತ್ರವಾದ ಮಣ್ಣೂರು ಇವರ ಕಾರ್ಯಕ್ಷೇತ್ರವಾಗಿತ್ತು. ಧ್ರುವಕರಾರ್ಚಿತ ಚೆನ್ನಕೇಶವನ ಈ ದಿವ್ಯಸನ್ನಿಧಾನದಲ್ಲಿಯೇ ತಮ್ಮ ಜೀವನದ ಬಹು ಭಾಗವನ್ನು ಕಳೆದರು. ಇವರ ವೈಯುಕ್ತಿಕ ಜೀವನ ಬಗ್ಗೆಯಾಗಲಿ ಇವರ ತಂದೆ ತಾಯಿಗಳ ಬಗ್ಗೆಯಾಗಲಿ ಹೆಚ್ಚಿನ ವಿವರಗಳು ದೊರಕು-ವುದಿಲ್ಲ. ಈ ಬಗ್ಗೆ ಸಂಶೋಧನೆ ನಡೆಯಬೇಕಿದೆ.

### ವೇದೇಶತೀರ್ಥರ ಪೂರ್ವವೃತ್ತಾಂತ

ಈಗ ಲಭ್ಯವಿರುವ ಮಾಹಿತಿಗಳ ಪ್ರಕಾರ ಇವರು ಚಿನ್ನ ಮುತ್ತು ರತ್ನಗಳ ವ್ಯಾಪಾರಮಾಡುವ ಚಿನಿವಾರರ ಮನೆತನಕ್ಕೆ ಸೇರಿದವರು. ಆ ಮನೆತನದ ಕಿರಿಯ-ರಾಗಿದ್ದ ಇವರ ಹೆಸರು ಭಾಗಪ್ಪಯ್ಯ. ಸುಸಂಸ್ಕೃತ ನಡವಳಿಕೆಯನ್ನು ರೂಢಿಸಿಕೊಂಡಿದ್ದ ಇವರಿಗೆ ಕೃಷ್ಣಪ್ಪಯ್ಯ ಯಾದಪ್ಪಯ್ಯರೆಂಬ ಇಬ್ಬರು ತಮ್ಮಂದಿರು. ಈ ಮೂವರೂ ಒಟ್ಟಿಗೇ ಇರುತ್ತಿದ್ದರು. ಇವರದು ಅವಿಭಕ್ತ ಕುಟುಂಬ. ತಮ್ಮ ಯಾದಪ್ಪಯ್ಯ ಬಂಗಾರದ ವ್ಯಾಪಾರಕ್ಕಾಗಿ ಪಟ್ಟಣಕ್ಕೆ ಹೋಗಿ ಬಂದು ಮಾಡುತ್ತಿದ್ದ. ಇನ್ನೊಬ್ಬ ತಮ್ಮ ಹೊಲ ಮನೆಗಳನ್ನು ನೋಡಿಕೊಳ್ಳುತ್ತಿದ್ದ.

ಭಾಗಪ್ಪಯ್ಯನವರು ಮನೆಯ ಯಜಮಾನರಾಗಿ ಮನೆಯ ಆಗುಹೋಗುಗಳ ಬಗ್ಗೆ ನಿಗಾ ಇಟ್ಟಿದ್ದರು. ಹೀಗೆ ಇವರ ಸಂಸಾರ ಕಂಸಾರಿಯ ದಯೆಯಿಂದ ಬಹಳ ಸುಖಮಯವಾಗಿತ್ತು.

ಸ್ವಲ್ಪದಿವಸಗಳ ಕಳೆಯುವದರೊಳಗೇ ಭಾಗಪ್ಪಯ್ಯನವರು. ತಮ್ಮ ತಮ್ಮಂದಿರ

ವಿವಾಹವನ್ನು ತಾವೇ ಮುಂದೆ ನಿಂತು ಅದ್ದೂರಿಯಾಗಿ ಮಾಡಿದರು. ಊರಿಗೆ ಭಾರೀ ಶ್ರೀಮಂತರಾದ್ದರಿಂದ ಅವರಿಗೆ ಯಾವುದಕ್ಕೂ ಕೊರತೆ ಇರಲಿಲ್ಲ. ನಂತರ ಅವರೆಲ್ಲರೊಡನೆ ಆನಂದದಿಂದ ಜೀವನ ಸಾಗಿಸುತ್ತಿದ್ದರು. ಈ ನಡುವೆ ಕೃಷ್ಣಪ್ಪನಿಗೆ ಗಂಡುಮಗುವೊಂದು ಜನಿಸಿತು. ತೇಜಸ್ವಿಯೂ ಸ್ಫುರದ್ರೂಪಿಯೂ ಆದ ಆ ಮಗುವಿಗೆ ಜಾತಕರ್ಮಾದಿ ಸಂಸ್ಕಾರವನ್ನು ನಿರ್ವಹಿಸಿ ''ಶ್ರೀನಿವಾಸ''ನೆಂದು ನಾಮಕರಣ ಮಾಡಿದ್ದರು. ಇವರೇ ಮುಂದೆ ''ಶ್ರೀನಿವಾಸತೀರ್ಥರು'' ಎಂಬ ಪ್ರಸಿದ್ಧ ಟಿಪ್ಪಣಿಕಾರರಾದರು.

ಮುಂದೆ ಕೆಲವುದಿನಗಳಲ್ಲಿಯೇ ವಿಧಿಯ ವಕ್ರದೃಷ್ಟಿಯಿಂದಾಗಿ ಕೃಷ್ಣಪ್ಪನವರ ಆರೋಗ್ಯ ಹದಗೆಟ್ಟಿತು. ಬಗೆಬಗೆಯ ಔಷಧೋಪಚಾರಗಳು ನಡೆದರೂ ಅವರ ರೋಗ ವಾಸಿಯಾಗಲಿಲ್ಲ. ಕೊನೆಗೊಂದು ದಿನ ರೋಗದಿಂದ ಜರ್ಝರಿತರಾಗಿ ದೇಹತ್ಯಾಗ ಮಾಡಿದರು. ಕೆಲವುದಿನಗಳ ಹಿಂದೆ ಅವರ ಮನೆಯಲ್ಲಿ ಇದ್ದ ಸಂಭ್ರಮದ ವಾತಾವರಣ ಮಾಯವಾಗಿ ದುಃಖದ ವಾತಾವರಣ ಏರ್ಪಟ್ಟಿತು. ತಮ್ಮ ಬಲ-ಭುಜದಂತಿದ್ದ ತಮ್ಮನನ್ನು ಕಳೆದುಕೊಂಡದ್ದು ಅವರಿಗೆ ಬರಸಿಡಿಲು ಬಡಿದಂತಾಯಿತು. ಈ ಘಟನೆ ಅವರ ಜೀವನ ದಿಕ್ಕನ್ನೇ ಬದಲಿಸಿತು. ಈ ಅಸಾರ-ವಾದ ಸಂಸಾರದ ಕ್ಷಣಭಂಗುರತೆಯನ್ನರಿತ ಅವರ ಚಿತ್ತ ಭಗವಂತನತ್ತ ವಾಲಲಾ-ರಂಭಿಸಿತು. ಹರಿಯ ಕರುಣೆಯನ್ನು ಪಡೆಯುವದೇ ಜೀವನದ ಚರಮ ಪರಮ ಗುರಿ ಎಂದು ಭಾವಿಸಿದರು. ತಮ್ಮ ಮನೆಯ ಸಮಸ್ತ ಹೊಣೆಗಾರಿಕೆಯನ್ನೂ ಇನ್ನೊಬ್ಬ ತಮ್ಮ ಯಾದಪ್ಪನಿಗೆ ವಹಿಸಿ ವೈರಾಗ್ಯವನ್ನು ತಾಳಿ ಉತ್ತರಾದಿಮಠಾಧೀಶರಾದ ಮಹಾಮಹಿಮರಾದ ''ಶ್ರೀರಘೂತ್ತಮತೀರ್ಥರಿಗೆ'' ಶರಣುಬಂದರು. ತಮ್ಮನ್ನು ಶಿಷ್ಯರನ್ನಾಗಿ ಸ್ವೀಕರಿಸಿ ಉದ್ಧರಿಸಬೇಕೆಂದು ವಿನಂತಿಸಿಕೊಂಡರು.

### ಶ್ರೀರಘೂತ್ತಮರಿಂದ ಆಶ್ರಮ ಸ್ವೀಕಾರ

ಮಹಾತಪಸ್ವಿಗಳೂ, ವಿರಕ್ತಶಿಖಾಮಣಿಗಳೂ ಆದ ಶ್ರೀರಘೂತ್ತಮತೀರ್ಥ ಶ್ರೀಪಾದರು ಅವರ ಯೋಗ್ಯತೆಯನ್ನು ತಿಳಿದು ಅವರಿಗೆ ಆಶ್ರಮವನ್ನಿತ್ತು 'ಶ್ರೀವೇದೇಶತೀರ್ಥರು' ಎಂದು ನಾಮಕರಣ ಮಾಡಿದರು.

## ಶ್ರೀರಘೂತ್ತಮರಲ್ಲಿ ಅಧ್ಯಯನ

ಆಶ್ರಮ ಸ್ವೀಕರಿಸಿದ ತರುವಾಯ ಏಳೆಂಟು ವರುಷಗಳ ಕಾಲ ಗುರುಗಳಾದ ರಘೂತ್ತಮರಲ್ಲಿಯೇ ವೇದಾಂತ ಉದ್ಗ್ರಂಥಗಳನ್ನೆಲ್ಲಾ ವ್ಯಾಸಂಗಮಾಡಿದರು. ಅನತಿಕಾಲದಲ್ಲಿಯೇ ತಮ್ಮ ಪ್ರಖರ ಪಾಂಡಿತ್ಯದಿಂದ ಅನೇಕಾನೇಕ ಶಿಷ್ಯರನ್ನು ತಯಾರಿಸಿ ಅನೇಕಗ್ರಂಥಗಳನ್ನು ರಚಿಸಿ ವಿಶ್ವವಿಖ್ಯಾತರಾದರು. ಅರ್ವಾಚೀನ ಟಿಪ್ಪಣೀಕಾರರಲ್ಲಿ ಅಗ್ರಗಣ್ಯರೆನಿಸಿದರು. ತಮ್ಮ ಉದ್ಧಾರಕರಾದ ಶ್ರೀರಘೂತ್ತಮ ಗುರುಗಳನ್ನು ತಮ್ಮ ಟಿಪ್ಪಣಿಗಳ ಪ್ರಾರಂಭದಲ್ಲಿ ತುಂಬು ಮನದಿಂದ ನೆನಿಸಿ-ಕೊಂಡಿದ್ದಾರೆ. 'ಗುರುರಘೂತ್ತಮಯೋಗಿಸುಶಿಕ್ಷಿತಃ' ಎಂದು ತತ್ತ್ವೋದ್ಯೋತದ ಟಿಪ್ಪಣಿಯ ಪ್ರಾರಂಭದಲ್ಲಿಯೂ ''ರಘೂತ್ತಮಮುನೀನ್ ವಿದ್ಯಾಗುರೂನ್'' ಎಂದು ಛಾಂದೋಗ್ಯೋಪನಿಷದ್ ಭಾಷ್ಯ ಟಿಪ್ಪಣಿಯ ಪ್ರಾರಂಭದಲ್ಲಿಯೂ ಹಾಗೂ ಬೇರೆ ಟಿಪ್ಪಣಿಗ್ರಂಥಗಳಲ್ಲಿ ಅವರು ಮಾಡಿರುವ ಗುರುನಮನಾದಿಗಳಿಂದ ಹಾಗೂ ಛಾಂದೋಗ್ಯೋಪನಿಷದ್ ಭಾಷ್ಯ [1]ಟೀಕೆಯ ಕೊನೆಯಲ್ಲಿ ಈ ಗ್ರಂಥರಚನೆ-ಯಿಂದುಂಟಾದ ಪುಣ್ಯವನ್ನೆಲ್ಲಾ ನನ್ನ ಗುರುಗಳು ಹೊಂದಲಿ ಎಂದು ಹೇಳಿರುವುದರಿಂದಲೂ ಅವರಿಗೆ ಗುರುಗಳೆಲ್ಲಿರುವ ನಿರ್ವ್ಯಾಜಭಕ್ತಿಯ ಅರಿವಾಗುತ್ತದೆ.

## ವೇದವ್ಯಾಸತೀರ್ಥರು ವೇದೇಶತೀರ್ಥರ ವಿದ್ಯಾಗುರುಗಳೇ ?

'ವೇದವ್ಯಾಸತೀರ್ಥರು ವೇದೇಶತೀರ್ಥರ ಗುರುಗಳೇ?' ಎಂಬ ಪ್ರಶ್ನೆಗೆ ಹೌದು ಎಂದೇ ಉತ್ತರಿಸಬೇಕಾಗುತ್ತದೆ. ವೇದೇಶತೀರ್ಥರು ಶ್ರೀರಘೂತ್ತಮತೀರ್ಥರಲ್ಲಿ ವ್ಯಾಸಂಗ ಮಾಡಿದ್ದರೂ ಕೆಲವು ವರ್ಷಗಳ ಕಾಲ ಶ್ರೀರಘೂತ್ತಮತೀರ್ಥರ ಉತ್ತರಾಧಿ ಕಾರಿಗಳಾದ ಶ್ರೀವೇದವ್ಯಾಸತೀರ್ಥರಲ್ಲಿಯೂ ಅಧ್ಯಯನ ಮಾಡಿರಬೇಕು. ಆದ್ದರಿಂದಲೇ ಛಾಂದೋಗ್ಯೋಪನಿಷದ್ ಭಾಷ್ಯದ ಟಿಪ್ಪಣಿಯ ಪ್ರಾರಂಭದಲ್ಲಿ

''ನಿರಸ್ತಂ ಹೃತ್ತಮೋ ಯೇನ ಪ್ರಶಸ್ತಂ ಸನ್ಮನೋಽಂಬುಜಂ ।
ಸಮಸ್ತಂ ಭಾಸಿತಂ ವಂದೇ ವೇದವ್ಯಾಸದಿವಾಕರಂ ॥'' ಎಂದು ತಮ್ಮ

---

1. ''ಛಾಂದೋಗ್ಯೋಪನಿಷದ್ಭಾಷ್ಯಪಂಚಿಕಾಕರಣೇನ ಯತ್ ।
ಪುಣ್ಯಂ ಭವೇದವಾಪ್ನೋತು ಸರ್ವಂ ಮಮ ಗುರುಃ ಸ್ವಯಮ್ ॥''

ಗುರುಗಳಾದ ಶ್ರೀವೇದವ್ಯಾಸತೀರ್ಥರನ್ನು ಕೊಂಡಾಡಿದ್ದಾರೆ. ಛಾಂದೋಗ್ಯೋಪ-ನಿಷದ್ ಭಾಷ್ಯದ ಟೀಕೆಯಲ್ಲಿ ಪ್ರತಿಯೊಂದು ಅಧ್ಯಾಯದ ಕೊನೆಯಲ್ಲಿ

**''ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಸ್ಯ ಛಾಂದೋಗ್ಯೋಪನಿಷದ್ಭಾಷ್ಯಸ್ಯ ಟೀಕಾಯಾಂ ಶ್ರೀವೇದವ್ಯಾಸತೀರ್ಥಪೂಜ್ಯಪಾದಶಿಷ್ಯವೇದೇಶಭಿಕ್ಷುವಿರಚಿತಾಯಾಂ ಪದಾರ್ಥಕೌಮುದ್ಯಾಂ''**

ಎಂದು ಹೇಳಿರುವದರಿಂದ ಇವರಿಗೆ ವೇದವ್ಯಾಸತೀರ್ಥರೂ ಕೂಡ ಗುರುಗಳಾಗಿದ್ದರೆಂದು ವೇದ್ಯವಾಗುತ್ತದೆ. ಇವರು ತಮ್ಮನ್ನು 'ವೇದೇಶಭಿಕ್ಷು'ಗಳು ಎಂದು ಕರೆದುಕೊಂಡಿರುವುದರಿಂದ ಯಾವುದೇ ಮಠದ ಪೀಠಾಧಿಪತಿಯಾಗಿರದೇ ಬಿಡಿ ಸಂನ್ಯಾಸಿಗಳಾಗಿರಬೇಕೆಂದು ಭಾಸವಾಗುತ್ತದೆ.

ಇವರ ಪೂರ್ವಾಶ್ರಮದ ಇನ್ನೊಬ್ಬ ತಮ್ಮ ಯಾದಪ್ಪ ಮುತ್ತುರತ್ನಗಳ ವ್ಯಾಪಾರಕ್ಕಾಗಿ ಪಟ್ಟಣಕ್ಕೆ ಹೋಗುವಾಗ

**''ಅಗ್ರತೋ ನಾರಸಿಂಹಶ್ಚ ಪೃಷ್ಠತೋ ಗೋಪಿನಂದನಃ।**
**ಉಭಯೋಃ ಪಾರ್ಶ್ವಯೋರಾಸ್ತಾಂ ಸಶರೌ ರಾಮಲಕ್ಷ್ಮಣೌ''**

(ಮುಂಭಾಗದಲ್ಲಿ ನರಸಿಂಹದೇವರು, ಹಿಂಭಾಗದಲ್ಲಿ ಶ್ರೀಕೃಷ್ಣ ಎರಡುಬದಿಗಳಲ್ಲಿ ಬಿಲ್ಲುಬಾಣಗಳನ್ನು ಧರಿಸಿರುವ ರಾಮಲಕ್ಷ್ಮಣರು ಕಾಪಾಡು-ತ್ತಿರಲಿ) ಎಂದು ಪ್ರಾರ್ಥಿಸುತ್ತಿದ್ದರು. ಇದರಿಂದ ಬಹಳ ದಿನಗಳಿಂದ ಇವರನ್ನು ಲೂಟಿ ಮಾಡಲು ಹೊಂಚುಹಾಕಿ ಕಾಯುತ್ತಿದ್ದ ಕಳ್ಳರು ಇವರನ್ನು ಸಮೀಪಿಸಿ ಇವರನ್ನು ಕಾಯುತ್ತಿದ್ದ ವ್ಯಕ್ತಿಗಳನ್ನು ನೋಡಿ ಭಯಭೀತರಾಗಿ ಹಿಂತಿರುಗಿದರು. ಆಮೇಲೆ ಯಾದಪ್ಪನ ಕಾಲಿಗೆ ಬಿದ್ದು ಎಲ್ಲ ವಿಷಯ ತಿಳಿಸಿದರು. ಆಗ ಯಾದಪ್ಪನಿಗೆ ಮೊದಮೊದಲು ಅವರು ಯಾರು ಎಂದು ಗೊತ್ತಾಗಲಿಲ್ಲ ಕೊನೆಗೆ ತಾವು ಹೊರಡುವಾಗ ಹೇಳಿದ ಧ್ಯಾನ ಶ್ಲೋಕದ ನೆನಪಾಯಿತು. ಆ ನಾಲ್ಕು ವ್ಯಕ್ತಿಗಳು ಬೇರೆ ಯಾರೂ ಅಲ್ಲ ಅವು ಭಗವಂತನ ನಾಲ್ಕು ರೂಪಗಳು. ಅವುಗಳನ್ನು ಕಂಡ ನೀವೇ ಧನ್ಯರು ಎಂದು ಪ್ರಶಂಸಿದರು. ಈ ಘಟನೆಯಿಂದ ಅವರ ಜೀವನದ ದಿಕ್ಕು ಬದಲಾಯಿತು. ವೈರಾಗ್ಯ ಉಂಟಾಯಿತು. ಮನೆ ಮಾರುಗಳನ್ನು ತೊರೆದು

ಅಣ್ಣಂದಿರಾದ ವೇದೇಶತೀರ್ಥರ ಬಳಿಗೆ ಬಂದರು. ತಮ್ಮನ್ನು ಉದ್ಧರಿಸಬೇಕೆಂದು ವಿನಮ್ರರಾಗಿ ಪ್ರಾರ್ಥಿಸಿದರು.

ಆಗ ಶ್ರೀವೇದೇಶತೀರ್ಥರು ತಮ್ಮನ ಅಭ್ಯುದಯವನ್ನು ಬಯಸಿ ಅವನನ್ನು ಉತ್ತಮ ಸಾಧಕನನ್ನಾಗಿ ಮಾಡಬೇಕೆಂದು ತೀರ್ಮಾನಿಸಿ ದಿಗ್ವಿಜಯಕ್ಕೆ ಹೋಗದೆ ಮಣ್ಣೂರಿನಲ್ಲೇ ನೆಲೆನಿಂತರು. "ಅನುಜೋದಯಮಾಶಾಸೇ ನಾಽಽಶಾಸೇ ದೇಶದಿಗ್ಜಯಮ್" ಎಂದರು. ಮಣ್ಣೂರಿನಲ್ಲಿಯೇ ತಮ್ಮ ತಮ್ಮ ಯಾದವಪ್ಪನಿಗೆ ವೇದಾಂತಗ್ರಂಥಗಳ ಪಾಠ ಹೇಳಿ ಪ್ರಸಿದ್ಧ ಟಿಪ್ಪಣೀಕಾರರನ್ನಾಗಿ ತಯಾರುಮಾಡಿದರು. ಅವರೇ ಮುಂದೆ ಶ್ರೀಮನ್ನ್ಯಾಯಸುಧಾಗ್ರಂಥಕ್ಕೆ ಯಾದುಪತ್ಯ ಎಂಬ ಪ್ರಸಿದ್ಧ ಟಿಪ್ಪಣಿಯನ್ನು ಬರೆದು " ಶ್ರೀಯಾದವಾರ್ಯರು" ಎಂದು ಪ್ರಸಿದ್ಧರಾದರು. ಹೀಗೆ ಅನೇಕ ಗ್ರಂಥಕಾರರ ಪಡೆಯನ್ನೇ ವೇದೇಶತೀರ್ಥರು ನಿರ್ಮಿಸಿದರು. ತಮ್ಮ ಇಡೀ ಜೀವನವನ್ನು ಜನತೆಯ ಅಭ್ಯುದಯಕ್ಕಾಗಿ ಮೀಸಲಿಟ್ಟರು.

### ವೇದೇಶತೀರ್ಥರ ಗ್ರಂಥಗಳು

ಇವರು ಅನೇಕಾನೇಕ ಗ್ರಂಥಗಳನ್ನು ರಚಿಸಿ ಜನರಿಗೆ ಅಪಾರ ಉಪಕಾರ ಮಾಡಿದರು. ಅವರು ರಚಿಸಿರುವ ಗ್ರಂಥಗಳು ಇಂತಿವೆ.

1. ತತ್ತ್ವೋದ್ಯೋತ ಟಿಪ್ಪಣೀ
2. ಪ್ರಮಾಣಪದ್ಧತಿ ಟಿಪ್ಪಣೀ
3. ಛಾಂದೋಗ್ಯೋಪನಿಷದ್ ಭಾಷ್ಯ ಟೀಕಾ ಪದಾರ್ಥದೀಪಿಕಾ
4. ಕಾಠಕೋಪನಿಷದ್ ಭಾಷ್ಯಟೀಕಾ
5. ತಲವಕಾರೋಪನಿಷದ್ ಭಾಷ್ಯ ಟೀಕಾ
6. ಐತರೇಯೋಪನಿಷದ್ ಭಾಷ್ಯ ಟೀಕಾ
7. ಕಥಾಲಕ್ಷಣ ಟಿಪ್ಪಣೀ

ಇದಲ್ಲದೇ ಶ್ರೀಮದಾನಂದತೀರ್ಥಭಗವತ್ಪಾದರ ಪ್ರಮಾಣಲಕ್ಷಣ ಹಾಗೂ ವಿಷ್ಣುತತ್ತ್ವನಿರ್ಣಯಗಳಿಗೆ ಶ್ರೀಜಯತೀರ್ಥರು ರಚಿಸಿರುವ ಟೀಕಾಕ್ಕೆ ಟಿಪ್ಪಣಿಯನ್ನು ಸಹ ಬರೆದಿದ್ದಾರೆಂದು ಪ್ರತೀತಿ ಇದೆ. ಆದರೆ ಇದಕ್ಕೆ ಸಂಬಂಧಪಟ್ಟ ಒಂದು ಹಸ್ತಪ್ರತಿಯೂ ಲಭ್ಯವಾಗಿಲ್ಲವೆಂದು ಬಿ.ಎನ್.ಕೆ ಶರ್ಮಾರವರು ಹೇಳಿದ್ದಾರೆ.

'ಬೃಹದಾರಣ್ಯಕೋಪನಿಷತ್'ಗೆ ತಮ್ಮ ವಿದ್ಯಾಗುರುಗಳಾದ ಶ್ರೀರಘೂತ್ತಮರು 'ಭಾವಬೋಧ'ವನ್ನು ಬರೆದಿದ್ದರಿಂದ ಅವರ ಮೇಲಿನ ಗೌರವದಿಂದ ಇವರು ಅದಕ್ಕೆ ಟಿಪ್ಪಣಿ ಬರೆಯಲಿಲ್ಲ. ಐತರೇಯೋಪನಿಷದ್ ಭಾಷ್ಯಕ್ಕೆ ಇವರು ಬರೆದಿರುವ ಟೀಕೆ ಈವರೆಗೂ ಮುದ್ರಿತವಾಗದಿರುವುದು ನಮ್ಮೆಲ್ಲರ ದೌರ್ಭಾಗ್ಯವೇ ಸರಿ.

ಉಪನಿಷದ್ ಭಾಷ್ಯಕ್ಕೆ ಇವರು ಟೀಕೆಯನ್ನು ಬರೆಯುವಾಗ ಭಾಷ್ಯಾರ್ಥದ ಜೊತೆಗೆ ''ತತಶ್ಚಾಯಂ ಖಂಡಾರ್ಥಃ'' ''ತತಶ್ಚಾಯಂ ಖಂಡಸ್ಯಾಕ್ಷರಾರ್ಥಃ'' ''ತತಶ್ಚೇಯಂ ಖಂಡಸ್ಯಾಕ್ಷರಯೋಜನಾ'' ಎಂದು ಖಂಡಾರ್ಥವನ್ನು ವಿವರಿಸಿದ್ದಾರೆ. ಎಲ್ಲಿ ಭಾಷ್ಯಾರ್ಥದಿಂದಲೇ ಖಂಡಾರ್ಥವು ಸ್ಪಷ್ಟವಾಗಿದೆಯೋ ಅಲ್ಲಿ ಖಂಡಾರ್ಥವನ್ನು ಪ್ರತ್ಯೇಕ ವಿವರಿಸಿರುವುದಿಲ್ಲ. ಇವರ ಟಿಪ್ಪಣಿಯ ಇನ್ನೊಂದು ವೈಶಿಷ್ಟ್ಯವೆಂದರೆ ಶ್ರೀವಿಜಯೀಂದ್ರರ ವ್ಯಾಖ್ಯಾನದ ವಿಮರ್ಶೆ. ಪ್ರಮಾಣಪದ್ಧತಿಯ ವ್ಯಾಖ್ಯಾನದಲ್ಲಿ ಹಾಗೂ ತತ್ತ್ವೋದ್ಯೋತದ ಟಿಪ್ಪಣಿಯಲ್ಲಿ ಅನೇಕ ಕಡೆಗಳಲ್ಲಿ ಶ್ರೀವಿಜಯೀಂದ್ರರ ಟಿಪ್ಪಣಿಯ ಅನೇಕ ವಿಷಯಗಳನ್ನು ಎತ್ತಿಕೊಂಡು ವಿಮರ್ಶೆ-ಮಾಡಿರುವುದು ಕಂಡುಬರುತ್ತದೆ. ಇದು ಅವರ ಅಗಾಧ ಪಾಂಡಿತ್ಯದ ಹಾಗು ಆಳವಾದ ಚಿಕಿತ್ಸಕ ಬುದ್ಧಿಯ ದರ್ಶನಮಾಡಿಸುತ್ತದೆ.

**ಅಹಂಕಾರದಿಂದ ದೂರ ಈ ಯತಿವರ**

ಹೀಗೆ ಅಪ್ರತಿಮ ಪಾಂಡಿತ್ಯದ ಬೀಡಾಗಿದ್ದರೂ. ಇವರಲ್ಲಿ ಅಹಂಕಾರದ ಲವಲೇಶವೂ ಇರಲಿಲ್ಲ. ವಿನಯವೇ ಮೂರ್ತಿವೆತ್ತಂತಿದ್ದರು. ವಿದ್ಯಾವಿನಯಗಳ ಅಪರೂಪದ ಸಂಗಮಕ್ಕೆ ಈ ಯತಿಪುಂಗವರು ದೃಷ್ಟಾಂತವಾಗಿದ್ದರು. ಆದ್ದರಿಂದ ತತ್ತ್ವೋದ್ಯೋತ ಟಿಪ್ಪಣಿಯ ಕೊನೆಯಲ್ಲಿ ಹೀಗೆ ಹೇಳಿಕೊಂಡಿದ್ದಾರೆ. **''ಮಾತ್ಸರ್ಯಾದ್ ಅಥವಾಽತಿಕೌಶಲಧಿಯಾ ಯದ್ವಾಽಖಿಲಾರ್ಥಜ್ಞತಾಮಾನಾನ್ನೇದಮಕಾರಿ ಕಿಂತು ಸುಧಿಯಾಂ ತುಷ್ಟ್ಯೈ ಸ್ವಧೀಶುದ್ಧಯೇ । ಯದ್ವಾ ಮಂದ-ಧಿಯಾಂ ಅಮಂದಮತಿವಾಕ್‌ಟೀಕಾರ್ಥವಿಜ್ಞಪ್ತಯೇ ಯತ್ನೋಽಯಂ ಹರಿತುಷ್ಟಿ-ಕಾರ್ಯಪಿ ಭವೇದ್ ವೇದೇಶಭಿಕ್ಷೋರ್ಮಮ ॥''**

'ಹೊಟ್ಟೆಕಿಚ್ಚಿನಿಂದಾಗಲಿ , ನಾನು ಬುದ್ಧಿವಂತ ಎಂಬ ಗರ್ವದಿಂದಾಗಲಿ ಅಥವಾ ಎಲ್ಲವನ್ನೂ ಬಲ್ಲವ ಎಂಬ ದುರಭಿಮಾನದಿಂದಾಗಲಿ ಈ ಗ್ರಂಥವನ್ನು ರಚಿಸಿಲ್ಲ ಕೇವಲ

ಜ್ಞಾನಿಗಳ ಸಂತೋಷಕ್ಕಾಗಿ ನನ್ನ ಬುದ್ಧಿಶುದ್ಧಿಗಾಗಿ ಅಥವಾ ಮಂದಮತಿಗಳಿಗೆ ಟೀಕಾರ್ಥ ಸುಲಭವಾಗಲಿ ತಿಳಿಯಲಿ ಎಂಬ ಉದ್ದೇಶದಿಂದ ಈ ಗ್ರಂಥರಚನೆಯ ಯತ್ನಕ್ಕೆ ಕೈಹಾಕಿರುವೆ. ವೇದೇಶಭಿಕ್ಷುಯೆನಿಸಿರುವ ನನ್ನ ಈ ಯತ್ನವು ಹರಿಗುರುಗಳಿಗೆ ಸಂತಸವನ್ನೀಯಲಿ' ಎಂದು.

ಹೀಗೆ ಹಲವಾರು ವರ್ಷಗಳ ಕಾಲ ಸತತ ಪಾಠ ಪ್ರವಚನಗಳಿಂದ ತಮ್ಮ ವಾಸಸ್ಥಳವಾದ ಮಣ್ಣೂರನ್ನು ವಿದ್ವನ್ಮಣಿಗಳ ಊರನ್ನಾಗಿಸುತ್ತಾ ಅಲ್ಲಿನ ಜನತೆಯನ್ನು ಧನ್ಯರನ್ನಾಗಿಸುತ್ತ ಕಾರ್ತೀಕ ಶುದ್ಧ ಷಷ್ಠಿಯಂದು ಮಣ್ಣೂರಿನಲ್ಲಿಯೇ ವೃಂದಾವನಸ್ಥ-ರಾದರು. ಈಗಲೂ ವೃಂದಾವನದಲ್ಲಿದ್ದುಕೊಂಡು ಭಕ್ತರನ್ನು ಅನುಗ್ರಹಿಸುತ್ತಿರುವರು.

**'ಶಿವಾಯ ಲೋಕಸ್ಯ ಭವಾಯ ಭೂತಯೇ। ಯ ಉತ್ತಮಶ್ಲೋಕಪರಾಯಣಾ ಜನಾಃ। ಜೀವಂತಿ ನಾಽತ್ಮಾರ್ಥಮ್'** ಎಂಬ ಭಾಗವತದ ವಾಣಿಯಂತೆ ಲೋಕ-ಕಲ್ಯಾಣಕ್ಕಾಗಿ ಹಾಗೂ ಜನರ ಹಿತಕ್ಕಾಗಿ ಮಹಾಮಹಿಮರು ಜೀವಿಸುವರೇ ಹೊರತು ಸ್ವಾರ್ಥಕ್ಕಾಗಿ ಅಲ್ಲ. ಇವರ ಹೆಸರಿನಲ್ಲಿರುವ **'ವೇ'** ಎಂಬ ಮೊದಲಕ್ಷರವು ಭಕ್ತರ ಮಾನಸಿಕ ವೇದನೆಯನ್ನು ಪರಿಹರಿಸುವುದು. ಮಧ್ಯದಲ್ಲಿರುವ **'ದೇ'** ಎಂಬ ಅಕ್ಷರವು ದೇವಾಧಿದೇವನಾದ ಶ್ರೀಹರಿಯಲ್ಲಿ ಅಚಲ ಭಕ್ತಿಯನ್ನುಂಟುಮಾಡುವುದು. **'ಶ'** ಎಂಬ ಕೊನೆಯ ಅಕ್ಷರವು ಶರೀರದ ಒಳಗಿನ ಹಾಗೂ ಹೊರಗಿನ ಎಲ್ಲಾ ಶತ್ರುಗಳನ್ನು ನಾಶಮಾಡುವುದು. ಒಟ್ಟಾರೆ ಶ್ರೀವೇದೇಶತೀರ್ಥರೆಂಬ ಇವರ ಪವಿತ್ರನಾಮವು ಭಕ್ತಿಯಿಂದ ಉಚ್ಚರಿಸುವವರ ಐಹಿಕ ಪಾರತ್ರಿಕ ಸುಖಕ್ಕೆ ನಾಂದಿಯಾಗುವುದು ಎಂದು[1] ''ಶ್ರೀವೇದೇಶತೀರ್ಥಗುರುರಾಜಸ್ತೋತ್ರ''ದಲ್ಲಿ ವರ್ಣಿತವಾಗಿದೆ. ಆದರಂತೆ ಶ್ರೀವೇದೇಶತೀರ್ಥರು ನಮ್ಮ ಮನೋವೇದನೆಯನ್ನು ದೂರಮಾಡಿ, ದೇವಾಧಿ-ದೇವನಾದ ಶ್ರೀಹರಿಯಲ್ಲಿ ಭಕ್ತಿಯನ್ನು ಹುಟ್ಟಿಸಿ ನಮ್ಮ ಆಂತರಿಕ ಹಾಗೂ ಬಾಹ್ಯ ಎಂದು ಎರಡು ಬಗೆಯ ಎಲ್ಲಾ ಶತ್ರುಗಳನ್ನು ಸಂಹರಿಸಿ ಲೌಕಿಕ ಹಾಗೂ ಪಾರತ್ರಿಕ ಶ್ರೇಯಸ್ಸನ್ನು ಕರುಣಿಸಲಿ.

---

1. 'ವೇ' ಕಾರೋ ಹಿ ಯದೀಯನಾಮ ನಿಗತೋ ಹಂತ್ಯಂತರಾಂ ವೇದನಾಂ।
'ದೇ' ಕಾರಃ ಪ್ರದಿಶತ್ಯಲಂ ಸ್ಥಿರರತಿಂ ದೇವಾಧಿಪೇ ಶ್ರೀಹರೌ।
'ಶ' ತ್ರೂನ್ ಶಾತಯತೇ ಸಭಕ್ತಿಗದಿತೋ ಚಿತ್ತೇ ಶಕಾರೋ ಸತಾಂ।
ಶ್ರೀವೇದೇಶಗುರುರ್ನುತೋ ಹೃದಿಗತಾಃ ಸಃ ಶ್ರೇಯಸೇ ಭೂಯಸೇ ॥

## ಶ್ರೀವೇದೇಶತೀರ್ಥರ ಛಾಂದೋಗ್ಯಭಾಷ್ಯದ ಟೀಕಾ ವೈಶಿಷ್ಟ್ಯ

ವೇದೇಶತೀರ್ಥರು ಭಾಷ್ಯಾರ್ಥವನ್ನು ವಿವರಿಸುವಾಗ ಅಲ್ಲಲ್ಲಿ ಸುಂದರವಾದ ಅವತಾರಿಕೆಯನ್ನು ನೀಡಿ ಭಾಷ್ಯದ ಪದಗಳ ಸಾರ್ಥಕ್ಯವನ್ನು ಮನದಟ್ಟು-ಮಾಡಿಕೊಡುತ್ತಾರೆ. ಅನಾವಶ್ಯಕವಾದ ಒಂದೇ ಒಂದು ಪದವು ಭಾಷ್ಯದಲ್ಲಿಲ್ಲ ಎಂದು ಗೊತ್ತಾಗುವುದೇ ಅವರ ಟೀಕೆಯನ್ನು ನೋಡಿದಾಗ. ಮೇಲುನೋಟಕ್ಕೆ ಅನಾವಶ್ಯಕ ಎಂದು ತೋರುವ ಚ , ತು, ವೈ , ಅಥ, ಇತಿ ಮುಂತಾದ ಶಬ್ದಗಳಿಗೂ ಸುಂದರವಾದ ಸಂದರ್ಭೋಚಿತವಾದ ಅರ್ಥವನ್ನು ಹೇಳಿ ಅವು ಪ್ರಕೃತಕ್ಕೆ ಹೇಗೆ ಉಪಯುಕ್ತ-ವೆಂಬುದನ್ನು ತೋರಿಸಿಕೊಡುತ್ತಾರೆ. ಖಂಡಾರ್ಥವನ್ನು ವಿವರಿಸುವಾಗಲೂ ಉಪನಿಷತ್ತಿನ ಅನೇಕ ಶಬ್ದಗಳಿಗೆ ಭಾಷ್ಯಾನುಸಾರಿಯಾದ ಸೊಗಸಾದ ಅರ್ಥವನ್ನು ವರ್ಣಿಸುವರು. ಆಚಾರ್ಯರ ಭಾಷ್ಯದ ಗಾಂಭೀರ್ಯ ಮಹತ್ವ ಗೊತ್ತಾಗುವುದೇ ಇವರ ಟೀಕೆಯಿಂದ ಎಂದರೆ ಅತಿಶಯೋಕ್ತಿ ಆಗಲಾರದು. ಓದುಗರನ್ನು ಓದಿಸಕೊಂಡು ಹೋಗುವ ಸರಳ ಹಾಗೂ ಸುಲಭವಾದ ಆಕರ್ಷಕ ಶೈಲಿ ಇವರದು.

## ಉಪನಿಷತ್ತಿನಲ್ಲಿ ಅಧಿಕಪಾಠದ ಬಗ್ಗೆ ಉಲ್ಲೇಖ

ಅಲ್ಲಲ್ಲಿ ಉಪನಿಷತ್ತಿನ ಅಧಿಕ ಪಾಠದ ಬಗ್ಗೆ ತಮ್ಮ ಗ್ರಂಥದಲ್ಲಿ ಉಲ್ಲೇಖಿಸಿ ಅದಕ್ಕೆ ವ್ಯಾಖ್ಯಾನಮಾಡುವರು. ಉದಾಹರಣೆಗೆ ಒಂದನೇ ಅಧ್ಯಾಯದ ಒಂದನೇ ಖಂಡದ 8ನೇ ಮಂತ್ರದಲ್ಲಿ ಬರುವ ''**ಅಥ ಹ ಯ ಏವಾಯಂ ಮುಖ್ಯಪ್ರಾಣಸ್ತಮುದ್ಗೀಥ-ಮುಪಾಸೀತ ತಸ್ಯೇತರೈಃ ಪ್ರಾಣೈರುಪವ್ಯಾಖ್ಯಾನಂ ಭವತಿ**'' ಎಂಬ ಭಾಗ ಉಪನಿಷತ್ತಿನ ಕೆಲವು ಪಾಠಗಳಲ್ಲಿ ಮಾತ್ರ ಕಂಡುಬರುವ ಅಧಿಕಪಾಠವೆಂದು ಹೇಳಿ ಅದಕ್ಕೆ ವ್ಯಾಖ್ಯಾನಮಾಡಿದ್ದಾರೆ. ಶ್ರೀರಾಘವೇಂದ್ರತೀರ್ಥರು ತಮ್ಮ ಖಂಡಾರ್ಥದಲ್ಲಿ ಇದಕ್ಕೆ ವ್ಯಾಖ್ಯಾನ ಮಾಡಿರುವದಿಲ್ಲ.

ಹಾಗೆಯೇ ಈ ಉಪನಿಷತ್ತಿನ 6ನೇ ಅಧ್ಯಾಯದ 16ನೇ ಖಂಡದಲ್ಲಿ
''ಸರ್ವೇಷಾಂ ಖಲು ಭೂತಾನಾಂ ಆತ್ಮಾ ಸತ್ಯೇ ಪ್ರತಿಷ್ಠಿತಃ ।
ತೇನಾಽತ್ಮಾನಮಂತರ್ಧಾಯ ನ ಕಿಂಚಿತ್ ಪಾಪಮೃಚ್ಛತಿ ।
ಆತ್ಮಾ ಸತ್ಯ ಆತ್ಮಾ ಸಾಕ್ಷೀ ಸತಾಂ ಧರ್ಮಃ ಪ್ರತಾಪವಾನ್ ।
ನ ಸ ಪಾಪಾನಿ ಕುರುತೇ ಯಸ್ಯಾಽತ್ಮಾ ಭವತಿ ಪ್ರಿಯೋ

ಜಾಯತ್ಯೇಕೋ ಮ್ರಿಯತ್ಯೇಕೋಽಶ್ನಾತ್ಯೇಕಃ ಶುಭಾಶುಭಂ। ಇತಿ ॥

ತದ್ಧಾಸ್ಯ ವಿಜಜ್ಞಾವಿತಿ ವಿಜಜ್ಞಾವಿತಿ। ತದೇಷ ಶ್ಲೋಕಃ।

ಸರ್ವಭೂತಾತ್ಮಭೂತೇಭ್ಯಃ ಸಮ್ಯಗ್ ಭೂತಾನಿ ಪಶ್ಯತೋ ದೇವಾ ಅಪಿ ಮಾರ್ಗೇ ಮುಹ್ಯಂತಿ ಪದಜ್ಞಾನಾತ್ ಪದೈಷಿಣಃ। ಪದಜ್ಞಾನಾತ್ ಪದೈಷಿಣ ಇತಿ ॥ ಎಂಬ ಅಧಿಕಪಾಠವನ್ನುಲ್ಲೇಖಿಸಿ ಅದಕ್ಕೆ ವ್ಯಾಖ್ಯಾನಮಾಡಿದ್ದಾರೆ.

**'ನ ಕಾಂಚನ ಪರಿಹರೇತ್' ಎಂಬ ವಾಕ್ಯಕ್ಕೆ ಆಚಾರ್ಯರು ಮಾಡಿರುವ ವ್ಯಾಖ್ಯಾನದ ಸಮರ್ಥನೆ :**

ಈ ಉಪನಿಷತ್ತಿನ ಎರಡನೇ ಅಧ್ಯಾಯದ 13ನೇ ಖಂಡದಲ್ಲಿ ಬರುವ '' ನ ಕಾಂಚನ ಪರಿಹರೇತ್ । ತದ್ ವ್ರತಂ। '' ಎಂಬ ವಾಕ್ಯಕ್ಕೆ ಕೆಲವರು -ವಾಮದೇವ್ಯ-ಸಾಮೋಪಾಸಕನು ತನ್ನ ಅಂಗಸಂಗವನ್ನು ಬಯಸಿ ತನ್ನ ಹಾಸಿಗೆಯ ಬಳಿ ಬಂದ ಯಾವ ಸ್ತ್ರೀಯನ್ನೂ ಬಿಡಕೂಡದು ಎಂದು ವ್ಯಾಖ್ಯಾನಮಾಡಿದ್ದಾರೆ. ಆದರೆ ಆಚಾರ್ಯರು ''ಅತ್ಯಾಗೀ ಚ ಸ್ವಭಾರ್ಯಾಣಾಮ್''ಎಂದು ಅದರ ಅರ್ಥವನ್ನು ಭಾಷ್ಯದಲ್ಲಿ ಸ್ಪಷ್ಟಪಡಿಸಿದ್ದಾರೆ. ವಾಮದೇವ್ಯಸಾಮೋಪಾಸಕರು ತನ್ನ ಹೆಂಡತಿಯರ ಮಧ್ಯದಲ್ಲಿ ಅಂಗಸಂಗಬಯಸಿ ಬಂದ ಯಾರನ್ನೂ ಬಿಡಕೂಡದು ಎಂದು ಅದರ ಅರ್ಥ ಎಂದು. ವೇದೇಶತೀರ್ಥರು ತಮ್ಮ ಟೀಕೆಯಲ್ಲಿ ಪ್ರತಿಷೇಧಶಾಸ್ತ್ರದ ವಿರೋಧ ಬರುವದರಿಂದ ಆಚಾರ್ಯರು ಹೇಳಿದ ಅರ್ಥವೇ ಸಮಂಜಸವೆಂದಿದ್ದಾರೆ. 'ಅನೇನ 'ನ ಕಾಂಚನ ಪರಿಹರೇತ್' ಇತ್ಯಸ್ಯ ಸ್ವಭಾರ್ಯಾಣಾಂ ಮಧ್ಯೇ ನ ಕಾಂಚನ ಪರಿತ್ಯಜೇತ್ ಇತ್ಯರ್ಥಃ ಸೂಚಿತಃ । ತೇನ ಕಾಂಚನ ಕಾಂಚಿದಪಿ ಸ್ತ್ರಿಯಂ ಸ್ವತಲ್ಪಪ್ರಾಪ್ತಾಂ ಸಮಾಗಮಾರ್ಥಿನೀಂ ನ ಪರಿಹರೇತ್ ಇತಿ ವ್ಯಾಖ್ಯಾನಂ ಪರಸ್ತ್ರೀರಾಗಪಾರವಶ್ಯೇನ ಕೃತಮಿತ್ಯುಪೇಕ್ಷ್ಯಮಿತಿ ಸೂಚಿತಮ್ । ಪ್ರತಿಷೇಧಶಾಸ್ತ್ರ-ವಿರೋಧಾತ್ ।'' ಎಂದಿದ್ದಾರೆ.

ಅಲ್ಲಲ್ಲಿ''ಅಯಂ ಭಾವಃ' 'ಅತ್ರಾಯಂ ವಿವೇಕಃ' 'ಇದಮುಕ್ತಂ ಭವತಿ' 'ಅಯಮಾಶಯಃ' 'ಅಯಮರ್ಥಃ' ತತಶ್ಚಾಯಂ ವಿವೇಕೋ ಭವತಿ' ಎಂಬುದಾಗಿ ಆಯಾ ಪ್ರಕರಣಗಳ ಒಟ್ಟಾರೆ ಅರ್ಥವನ್ನು ಓದುಗರ ಅನುಕೂಲಕ್ಕಾಗಿ ಸಂಗ್ರಹಿಸಿ ಹೇಳುತ್ತಾರೆ. ಅಲ್ಲಲ್ಲಿ ಭಾಷ್ಯದ ಕೆಲವೊಂದು ಪಾಠಾಂತರಗಳ ಬಗ್ಗೆ ಉಲ್ಲೇಖಿಸಿ

ಅವುಗಳಿಗೂ ವ್ಯಾಖ್ಯಾನ ಮಾಡುತ್ತಾರೆ. 3ನೇ ಅಧ್ಯಾಯದ 15ನೇ ಖಂಡಕ್ಕೆ ಸಂಬಂಧಿಸಿದ 'ಪುಲ್ಲಿಂಗೇನೋಚ್ಯತೇ ಸ್ತ್ರೀ ಚ ಪುಂವಚ್ಛಕ್ತಿಮತೀ ಯದಿ' ಎಂಬ ಭಾಷ್ಯಭಾಗಕ್ಕೆ ವ್ಯಾಖ್ಯಾನಿಸುವಾಗ ಇಲ್ಲಿ 'ಪುಲ್ಲಿಂಗೇನೋಚ್ಯತೇ ಶ್ರೀಶ್ಚ' ಎಂದು ಕೆಲವೆಡೆ ಪಾಠವಿದೆ. ಆಗ 'ಯದಿ' ಎಂಬುದಕ್ಕೆ 'ಯಸ್ಮಾತ್ ' ಎಂದು ಅರ್ಥ ಎಂದು ವಿವರಿಸಿದ್ದಾರೆ. ಹೀಗೆ ಅವರ ಗ್ರಂಥದುದ್ದಕ್ಕೂ ಅನೇಕ ಪಾಠಾಂತರಗಳನ್ನುಲ್ಲೇಖಿಸಿ ವ್ಯಾಖ್ಯಾನಮಾಡಿರು-ವುದನ್ನು ಕಾಣಬಹುದಾಗಿದೆ.

## ಭಲ್ಲಾಕ್ಷಶಬ್ದಕ್ಕೆ ಆಚಾರ್ಯರು ಹೇಳಿರುವ ಅರ್ಥದ ಸಮರ್ಥನೆ :

ಇದೇ ರೀತಿ 4ನೇ ಅಧ್ಯಾಯದ 1ನೇ ಖಂಡದಲ್ಲಿ 2ನೇ ಮಂತ್ರದಲ್ಲಿ ಬರುವ ಭಲ್ಲಾಕ್ಷ ಎಂಬ ಶಬ್ದಕ್ಕೆ ಆಚಾರ್ಯರು ಮಂದಾಕ್ಷ (ಮಂದದೃಷ್ಟಿಯುಳ್ಳವನೇ) ಎಂದು ಅರ್ಥಬರೆದಿದ್ದಾರೆ. ಇತರರು "ಭದ್ರಂ ಸಾರಾಸಾರಾಭಿಜ್ಞಂ ಅಕ್ಷಂ ಇಂದ್ರಿಯಂ ಯಸ್ಯಾಸೌ ಭದ್ರಾಕ್ಷ" ಎಂದು ವಿಗ್ರಹ ಮಾಡಿ ಸಾರಾಸಾರಗಳನ್ನು ಬಲ್ಲ ಇಂದ್ರಿಯವುಳ್ಳವನೆಂದು ಅರ್ಥ ಮಾಡಿದ್ದಾರೆ. ಈ ಎರಡು ಅರ್ಥಗಳಲ್ಲಿ ಆಚಾರ್ಯರು ಹೇಳಿದ ಅರ್ಥವೇ ಅತ್ಯಂತ ಸಮರ್ಪಕ ಎಂದು ಗೊತ್ತಾಗುವದು ವೇದೇಶತೀರ್ಥರ ಟೀಕೆಯನ್ನು ನೋಡಿದಾಗಲೇ. ಇತರರು ಹೇಳಿದ ಅರ್ಥವನ್ನಿಟ್ಟು ಕೊಂಡರೆ ಶ್ರುತಹಾನ ಹಾಗೂ ಅಶ್ರುತಕಲ್ಪನಾಪ್ರಸಂಗ ಬರುವದು. ಭಲ್ಲಾಕ್ಷ ಎಂದು ಪೌತ್ರಾಯಣ ಜಾನಶ್ರುತಿಯ ತೇಜಸ್ಸು ಎಲ್ಲೆಡೆ ಹರಡಿರುವದನ್ನು ಕಾಣದೇ ಮುಂದೆ ಹೋಗುತ್ತಿರುವ ಹಂಸಗಳನ್ನು ಕುರಿತು ಹಿಂದೆ ಹಾರಿಬರುತ್ತಿರುವ ಹಂಸಗಳು ಹೇಳುತ್ತವೆ. ಇಲ್ಲಿ ಭಲ್ಲಾಕ್ಷತ್ವಕ್ಕೆ ಕಾರಣವನ್ನು 'ಜಾನಶ್ರುತೇಃ ಪೌತ್ರಾಯಣಸ್ಯ ಸಮಂ ದಿವಾ ಜ್ಯೋತಿರಾತತಂ ತನ್ಮಾ ಪ್ರಸಾಂಕ್ಷೀಃ । ತತ್ ತ್ವಾ ಮಾ ಪ್ರಧಾಕ್ಷೀಃ ಇತಿ ।' ಎಂಬುದರಿಂದ ಹೇಳಲಾಗಿದೆ. ಶ್ರುತವಾದ ಇದರ ಪರಿತ್ಯಾಗ ಮಾಡಿದಂತಾಗುವುದು. ಹಾಗೂ ಅಶ್ರುತವಾದ ಅಪ್ರಾಮಾಣಿಕ ಅರ್ಥವನ್ನು ಕಲ್ಪಿಸಿದಂತಾಗುವದು. ಇಷ್ಟೇ ಅಲ್ಲದೇ 'ಭಲ್ಲಾಕ್ಷ' ಎಂಬುದಕ್ಕೆ ಇತರರು ಹೇಳಿದ ಅರ್ಥವನ್ನು ಹೇಳಿದರೆ ನಿಂದಾಪ್ರಕರಣದ ವಿರೋಧ ಬರುವದು. "ಭಲ್ಲಾಕ್ಷೇತಿ ಮಂದದೃಷ್ಟಿತ್ವಂ ಸೂಚಯ-ನ್ನಾಹ" ಎಂಬ ಪರಭಾಷ್ಯದ ವಿರೋಧಬರುವದರಿಂದಲೂ ಆಚಾರ್ಯರು ಹೇಳಿದ ಅರ್ಥವೇ ಸರಿಯೆಂದು ವೇದೇಶತೀರ್ಥರು ತಮ್ಮ ಟಿಪ್ಪಣಿಯಲ್ಲಿ ಹೃದಯಂಗವಾಗಿ ನಿರೂಪಿಸಿದ್ದಾರೆ.

ಯದ್ಯಪಿ ಆಚಾರ್ಯರ ಛಾಂದೋಗ್ಯೋಪನಿಷದ್ ಭಾಷ್ಯವು ಅಗಾಧವೂ ಗಹನ ಗಂಭೀರವೂ ಆಗಿದೆ. ಇದಕ್ಕೆ ವ್ಯಾಖ್ಯಾನಮಾಡಲು ಸುರವರರೆನಿಸಿದ ರುದ್ರೇಂದ್ರಾದಿದೇವತೆಗಳೇ ಸಮರ್ಥರು ನನ್ನಂಥಹ ಅಲ್ಪ ವ್ಯಕ್ತಿ ಇಂಥಹ ಗ್ರಂಥದ ವ್ಯಾಖ್ಯಾನಕ್ಕೆ ಕೈಹಾಕಿರುವದು ಅತ್ಯಂತ ಹಾಸ್ಯಾಸ್ಪದವೇ ಸರಿ. ಹಾಗಿದ್ದರೂ ಶ್ರೀವೇದವ್ಯಾಸರು ಹಾಗೂ ಪೂರ್ಣಪ್ರಜ್ಞರ ಪಾದಕಮಲಗಳಲ್ಲಿರುವ ಭಕ್ತಿಯಿಂದಾಗಿ ಹಾಗೂ ಗುರುಗಳ ಕಾರುಣ್ಯದಿಂದಲೂ ಈ ಕೃತಿ ವಿದ್ವದ್‌ಭೂಷಣವಾದ ಕೃತಿ ಎನಿಸುವುದು ಎಂದು ಗ್ರಂಥದ ಕೊನೆಯಲ್ಲಿ ವಿನಮ್ರರಾಗಿ ಹೇಳಿಕೊಂಡಿದ್ದಾರೆ.

ಅಗಾಧೇಽಸ್ಮಿನ್ ಭಾಷ್ಯೇ ಸುರವರಹರೇಂದ್ರಾದಿವಿಬುಧೈಃ
ಅಲಂ ವ್ಯಾಖ್ಯೇಯೇ ಮೇ ಕೃತಿರಹಹ ಹಾಸಾಸ್ಪದತಮಾ ।
ತಥಾಽಪಿ ಶ್ರೀವ್ಯಾಸಾಲವಮತಿಪದಾಸಕ್ತಿವಶತೋ
ಗುರೂಣಾಂ ಕಾರುಣ್ಯಾದಪಿ ಭವತಿ ಭೂಷಾಕೃತಿರಿಯಮ್ ॥

**ಭಾಷ್ಯದ ಮಂಗಳಾಚರಣೆಯಲ್ಲಿ ಆಪಾತತಃ ಕಂಡುಬರುವ ಪುನರುಕ್ತಿಯ ಪರಿಹಾರ :**

ಆಚಾರ್ಯರು ಛಾಂದೋಗ್ಯೋಪನಿಷದ್‌ಭಾಷ್ಯದ [1]ಮಂಗಲಾಚರಣೆಯ ಶ್ಲೋಕದಲ್ಲಿ ಭಗವಂತನ ಸುಖಕ್ಕೆ ಅತ್ಯುದ್ರಿಕ್ತ, ವಿದೋಷ, ಸತ್ ಎಂಬ ಮೂರು ವಿಶೇಷಣಗಳನ್ನು ಕೊಟ್ಟಿದ್ದಾರೆ. ಆದರೆ ಇಲ್ಲಿ ಬರುವ ಸಮಸ್ಯೆಯೆಂದರೆ ಸುಖದಲ್ಲಿ ಸತ್ವವಿಶೇಷಣ ಕೊಟ್ಟಿರುವುದರಿಂದಲೇ ಭಗವಂತನ ಸುಖ ದೋಷರಹಿತ ಎಂದು ಗೊತ್ತಾಗುವುದರಿಂದ ಪುನಃ 'ವಿದೋಷ' ಎಂಬ ವಿಶೇಷಣವೇಕೆ? ಇದರಿಂದ ಪುನರುಕ್ತಿ ಬರುವುದಿಲ್ಲವೇ? ಎಂಬ ಪ್ರಶ್ನೆಗೆ ವೇದೇಶತೀರ್ಥರು ನೀಡುವ ಸಮಾಧಾನ ಹೀಗಿದೆ—ಇಲ್ಲಿ ಸತ್ಸುಖ ಎಂದರೆ ದೋಷರಹಿತ ಸುಖ ಎಂದರ್ಥವಲ್ಲ. ''ಸದ್ಭಾವೇ ಸಾಧುಭಾವೇ ಚ ಸದಿತ್ಯೇತತ್ ಪ್ರಯುಜ್ಯತೇ'' ಎಂಬ ವಚನದಂತೆ ಸತ್ ಎಂದರೆ

---

1. ಅತ್ಯುದ್ರಿಕ್ತವಿದೋಷಸತ್ಸುಖಮಹಾಜ್ಞಾನೈಕತಾನಪ್ರಭಾ
ಸರ್ವಪ್ರಾಭವಶಕ್ತಿಭೋಗಬಲಸತ್ಸಾರಾತ್ಮದಿವ್ಯಾಕೃತಿಂ ।
ಸೃಷ್ಟಿಸ್ಥಾನನಿರೋಧನಿತ್ಯನಿಯತಿಜ್ಞಾನಪ್ರಕಾಶಾವೃತಿ
ಧ್ವಾಂತಾಮೋಕ್ಷವಿಮೋಕ್ಷದಂ ಹರಿಮಜಂ ನಿತ್ಯಂ ಸದೋಪಾಸ್ಮಹೇ ॥

ಸಾಧುಭಾವ ಅರ್ಥಾತ್ ಶೋಭನತ್ವ. ಆಗ ಸತ್ಸುಖ ಎಂದರೆ ಶೋಭನ ಸುಖ ಎಂದರ್ಥ ಲಭಿಸುತ್ತದೆ. ಭಗವಂತನ ಸುಖವು ಶೋಭನವಾಗುವುದಕ್ಕೆ ಕಾರಣ, ಅದು ಅತ್ಯುದ್ರಿಕ್ತ ಹಾಗೂ ವಿದೋಷವಾಗಿರುವುದು ಎಂದು ಅತ್ಯುದ್ರಿಕ್ತ, ವಿದೋಷ ಎಂಬ ಎರಡು ವಿಶೇಷಣಗಳು ತಿಳಿಸುವುದರಿಂದ ಪುನರುಕ್ತಿ ಇಲ್ಲ ಎಂದು ಸೊಗಸಾಗಿ ವ್ಯಾಖ್ಯಾನ ಮಾಡಿರುವರು.

ಅಥವಾ, 'ಸಚ್ಛಬ್ದ ಉತ್ತಮಂ ಬ್ರೂಯಾತ್' ಎಂಬ ವಚನದಂತೆ 'ಸತ್' ಎಂದರೆ ಉತ್ತಮ ಎಂದರ್ಥ. ಆಗ ಸತ್ ಸುಖ ಎಂದರೆ ಉತ್ತಮಸುಖ ಎಂದರ್ಥವಾಗುತ್ತದೆ. ಭಗವಂತನ ಸುಖ ಉತ್ತಮವಾಗಲು ಕಾರಣ ಅದು ಅತ್ಯುದ್ರಿಕ್ತ ಹಾಗೂ ವಿದೋಷ ವಾಗಿರುವುದು. ಅತ್ಯುದ್ರಿಕ್ತ ಎಂಬುದಕ್ಕೆ ಇಲ್ಲಿ ಪರಿಪೂರ್ಣ ಎಂಬರ್ಥ ವಿವಕ್ಷಿತ-ವಾಗಿರುವುದರಿಂದ ಸತ್ ಶಬ್ದಾರ್ಥದೊಂದಿಗೆ ಪುನರುಕ್ತಿ ಇಲ್ಲ.

ಅಥವಾ, ಸತ್ ಎಂದರೆ ''ತದ್ ಯತ್ ಸತ್ ತದಮೃತಮ್'' ಎಂಬ ವೇದವಾಣಿಯನುಸಾರ 'ನಿತ್ಯ' ಎಂದರ್ಥ. ಆಗ ಭಗವಂತನ ಸುಖ ಸತ್ ಅರ್ಥಾತ್ ನಿತ್ಯ (ನಾಶವಿಲ್ಲದ್ದು) ಎಂದು ಸಿದ್ಧಿಸುತ್ತದೆ. 'ವಿದೋಷ' ಪದವು ಅನಿತ್ಯತ್ವದೋಷ-ವನ್ನು ಹೊರತು ಪಡಿಸಿ ಉಳಿದ ದೋಷಗಳನ್ನು ನಿಷೇಧಿಸುತ್ತದೆ. ಆದ್ದರಿಂದ ಇಲ್ಲಿ ಪುನರುಕ್ತಿಗೆ ಅವಕಾಶವಿಲ್ಲ.

ವಿದೋಷ ಪದದಿಂದಲೇ ಅನಿತ್ಯತ್ವದೋಷವನ್ನೂ ನಿಷೇಧಿಸಲು ಬರುವುದ-ರಿಂದ 'ಸತ್' ಎಂಬುದರಿಂದ ಭಗವಂತನ ಸುಖದಲ್ಲಿ ಅನಿತ್ಯತ್ವ ದೋಷವನ್ನು ನಿಷೇಧಿ ಸುವುದು ಸರಿಯೇ ? ಎಂದರೆ, [1]'ಕುರುಪಾಂಡವ' ನ್ಯಾಯದಂತೆ ಇದನ್ನು ಪರಿಗಣಿಸಬೇಕು. ಆದ್ದರಿಂದ ಇಲ್ಲಿ ಪುನರುಕ್ತಿ ಇಲ್ಲ.

---

1. ಪಾಂಡವರು ಯದ್ಯಪಿ ಕುರುವಂಶದವರೇ ಆದ್ದರಿಂದ ಕೌರವರೇ. ಹಾಗಿದ್ದರೂ ಪಾಂಡುಪುತ್ರತ್ವ ಎಂಬ ವಿಶೇಷಧರ್ಮದ ವಿವಕ್ಷೆಯಿಟ್ಟುಕೊಂಡು ಕೌರವರು ಪಾಂಡವರು ಎಂದು ವ್ಯವಹರಿಸಲಾಗುತ್ತದೆ. ಹಾಗೆಯೇ ಇಲ್ಲಿ ವಿದೋಷ ಎಂಬ ಪದ ಎಲ್ಲ ದೋಷಗಳನ್ನು ನಿಷೇಧಿಸುತ್ತಿದ್ದರೂ ಅನಿತ್ಯತ್ವವನ್ನು ಹೊರತು ಪಡಿಸಿ ಉಳಿದ ದೋಷಗಳನ್ನು ನಿಷೇಧಿಸುತ್ತಿದೆ ಎಂದು ವಿವಕ್ಷೆ ಇಟ್ಟುಕೊಂಡಿರುವುದರಿಂದ ಪುನರುಕ್ತಿಗೆ ಅವಕಾಶವಿಲ್ಲ.

ಅಥವಾ, ವಿದೋಷಸತ್ ಎಂಬುದು ಸುಖಕ್ಕೆ ವಿಶೇಷಣ. ವಿದೋಷಸತ್ ವಿದೋಷಭೂತಂ(ವಿದೋಷವಾದ) ಸುಖ, ಎಂದು ಹೇಳಿದಂತಾಗುವುದರಿಂದ ಯಾವ ಸಮಸ್ಯೆಯೂ ಬರುವುದಿಲ್ಲ.

**ಭಾಷ್ಯದ ಮಂಗಳಾಚರಣೆಯ ಉತ್ತರಾರ್ಧದಲ್ಲಿ 'ಉದ್ಗೀಥ'ಶಬ್ದಾರ್ಥ ಹೇಗೆ ಅಡಕವಾಗಿದೆ ಎಂಬುದರ ಅದ್ಭುತನಿರೂಪಣೆ**

ಇದೇ ರೀತಿ ಭಾಷ್ಯದ ಮಂಗಲಾಚರಣೆಯ ಉತ್ತರಾರ್ಧವು ಉದ್ಗೀಥ-ಶಬ್ದಾರ್ಥವನ್ನು ವಿವರಿಸಲು ಹೊರಟಿದೆ ಎಂಬುದನ್ನು ತಮ್ಮ ಟೀಕೆಯಲ್ಲಿ ಹೃದಯಂಗಮವಾಗಿ ನಿರೂಪಿಸಿದ್ದಾರೆ. ಉದ್ಗೀಥ ಎಂಬಲ್ಲಿ 'ಉತ್' ಶಬ್ದವು, 'ಉತ್ತಿಷ್ಠತಿ ಜಗತ್ ಅನೇನ ಇತಿ ಉತ್' ಎಂಬ ವ್ಯುತ್ಪತ್ತಿಯಿಂದ ಭಗವಂತ ಸೃಷ್ಟಿಪ್ರದ ಎಂಬುದನ್ನು ತಿಳಿಸುತ್ತದೆ. ''ಪ್ರಾಣ ಏವೋತ್ ಪ್ರಾಣೇನ ಹ್ಯುತ್ತಿಷ್ಠತಿ '' ಎಂದು ಮುಂದೆ ಉಪನಿಷತ್ತಿನಲ್ಲಿ ಹೇಳುವದರಿಂದ ಇದು ಸಮಂಜಸವಾಗಿದೆ. 'ಉದ್ಗೀಥ' ಎಂಬಲ್ಲಿರುವ 'ಥ ' ಶಬ್ದವು ಭಗವಂತ ಜಗತ್ತಿಗೆ ಸ್ಥಿತಿಪ್ರದ ಎಂಬುದನ್ನು ತಿಳಿಸುತ್ತದೆ. ''ಅನ್ನಂ ಥಮ್ ಅನ್ನೆ ಹೀದಂ ಸರ್ವಂ ಸ್ಥಿತಂ '' ಎಂಬ ಶ್ರುತಿಯೇ ಈ ವಿಷಯದಲ್ಲಿ ಪ್ರಮಾಣ. 'ಉದ್ಗೀಥ' ಎಂಬಲ್ಲಿರುವ 'ಗೀ' ಶಬ್ದವು 'ಗೄ ನಿಗರಣೆ' ಎಂಬ ಧಾತುವಿನಿಂದ ನಿಷ್ಪನ್ನವಾಗಿರುವದರಿಂದ ಭಗವಂತ ಜಗತ್ತಿಗೆ. ನಿರೋಧ (ನಾಶ) ಪ್ರದ ಎಂಬುದನ್ನು ತಿಳಿಸಿಕೊಡುತ್ತದೆ. 'ಉನ್ನಯತೀತಿ ಉತ್ ' ಎಂಬ ವ್ಯುತ್ಪತ್ತಿಯನುಸಾರ 'ಉತ್' ಶಬ್ದವು ಭಗವಂತ ನಿತ್ಯವೂ(ಯಾವಾಗಲೂ) ಅಥವಾ ನಿತ್ಯವಾದ ಪದಾರ್ಥಗಳಿಗೂ ನಿಯಾಮಕ ಎಂಬರ್ಥವನ್ನು ತಿಳಿಸಿಕೊಡುವದು. ''ನಿತ್ಯಂ ನಿತ್ಯಾತ್ಮನಾ ಯತಃ '' ಎಂಬ ಶ್ರುತಿಯೇ ಈ ವಿಷಯದಲ್ಲಿ ಆಧಾರ. 'ಉದ್ಗಮಯತಿ ಉದ್ಭಾಸಯತೀತಿ ಉತ್' ಎಂಬ ವ್ಯುತ್ಪತ್ತಿಗನುಗುಣವಾಗಿ ಉತ್‌ಶಬ್ದವು ಭಗವಂತ ಜಗತ್ತಿಗೆ ಜ್ಞಾನಪ್ರಕಾಶ-ಪ್ರಕಾಶಪ್ರದ ಎಂದು ತಿಳಿಸಿಕೊಡುತ್ತದೆ. ಆವೃತಿ(ಅಜ್ಞಾನ)-ಧ್ವಾಂತ(ಬಾಹ್ಯ ಕತ್ತಲು) ಅಮೋಕ್ಷ(ಸಂಸಾರ) ಈ ಮೂರನ್ನೂ ಜಗತ್ತಿಗೆ ನೀಡು-ವವನು ಭಗವಂತ ಎಂಬುದನ್ನು ''ಉದ್ಗೀಥ'' ಎಂಬಲ್ಲಿರುವ 'ಗತಿನಿವೃತ್ತಿ' ಎಂಬ ಅರ್ಥವನ್ನು ಕೊಡುವ 'ಷ್ಠಾ' ಧಾತುವಿನಿಂದ ನಿಷ್ಪನ್ನವಾದ 'ಥ' ಶಬ್ದವು ಸೂಚಿಸುತ್ತದೆ. ಅಜ್ಞಾನ ಹಾಗೂ ಸಂಸಾರವನ್ನು ಭಗವಂತ ಕೊಟ್ಟಾಗ ತಾನೇ ಮೋಕ್ಷಗತಿಗೆ ನಿವೃತ್ತಿಯಾಗುವುದು. ಕತ್ತಲೆಯನ್ನು ನೀಡಿದ್ದಾಗಷ್ಟೇ ಪ್ರಸಿದ್ಧಮಾರ್ಗಕ್ಕೆ ತಡೆ ಉಂಟಾ-

ಗುವದು. 'ಉದ್ಗಮಯತಿ ಸಂಸಾರಾತ್ ಇತಿ ಉತ್ ' ಎಂಬ ವ್ಯುತ್ಪತ್ತಿಗನುಗುಣವಾಗಿ 'ಭಕ್ತರಿಗೆ ಮೋಕ್ಷಪ್ರದ' ಎಂಬರ್ಥವನ್ನು 'ಉತ್' ಶಬ್ದವು ತಿಳಿಸುತ್ತದೆ. ಹೀಗೆ 'ಉದ್ಗೀಥ' ಎಂಬ ಒಂದೇ ಶಬ್ದದಲ್ಲಿ ಭಾಷ್ಯ ಮಂಗಲಾಚರಣೆಯ ಶ್ಲೋಕದ 'ಉತ್ತರಾರ್ಧ' ಹೇಗೆ ಅಡಕವಾಗಿದೆ ಎಂಬುದರ ಬಗ್ಗೆ ಅವರ ನಿರೂಪಣೆ ಲೋಕೋತ್ತರವಾಗಿದೆ. ಇದರಿಂದ ಅವರಿಗೆ ಶಾಸ್ತ್ರಗಳಲ್ಲಿರುವ ತಲಸ್ಪರ್ಶಿಪಾಂಡಿತ್ಯದ ಅರಿವಾಗುತ್ತದೆ. ಆಚಾರ್ಯರ ಭಾಷ್ಯ ಹೇಗೆ ಉಪನಿಷದನುಸಾರಿಯಾಗಿದೆ ಎಂಬುದರ ಮನವರಿಕೆಯೂ ಆಗುತ್ತದೆ. ಹೀಗೆ ಒಂದೊಂದು ವಿಷಯವನ್ನೂ ಹಲವಾರು ದೃಷ್ಟಿಕೋನಗಳಿಂದ ವಿಮರ್ಶಿಸುವುದು ಈ ಗ್ರಂಥದ ವೈಶಿಷ್ಟ್ಯ.

### ಬ್ರಹ್ಮಬಂಧುಶಬ್ದಕ್ಕೆ ಎರಡು ರೀತಿಯ ಅರ್ಥವರ್ಣನೆ

ಕೆಲವೆಡೆ ಖಂಡಾರ್ಥದಲ್ಲಿ ಉಪನಿಷತ್ತಿನ ಶಬ್ದಗಳಿಗೆ ಸೊಗಸಾದ ಅರ್ಥವನ್ನು ವಿವರಿಸುತ್ತಾರೆ. ಆರನೇ ಅಧ್ಯಾಯದ ಒಂದನೇ ಖಂಡದ 1ನೇ ಮಂತ್ರದಲ್ಲಿ ಬರುವ 'ಬ್ರಹ್ಮಬಂಧು' ಶಬ್ದಕ್ಕೆ ಎರಡುರೀತಿಯ ವಿವರಣೆ ನೀಡಿದ್ದಾರೆ.

ಬ್ರಾಹ್ಮಣಾನ್ ಬಂಧೂನ್ ವ್ಯಪದಿಶತಿ ನ ಸ್ವಯಂ ಬ್ರಾಹ್ಮಣೋಽಸೌ ಬ್ರಹ್ಮಬಂಧುಃ। (ಬ್ರಾಹ್ಮಣರನ್ನು ತನ್ನ ಬಂಧುಗಳೆಂದು ಹೇಳಿಕೊಳ್ಳುತ್ತಿದ್ದರೂ ಯಾರು ಸ್ವತಃ ಬ್ರಾಹ್ಮಣನಲ್ಲವೋ ಅವನು ಬ್ರಹ್ಮಬಂಧು)

ಅಥವಾ, ಬ್ರಾಹ್ಮಣನಿಗೆ ಬ್ರಾಹ್ಮಣಸ್ತ್ರೀಯಲ್ಲಿ ಜನಿಸಿದ್ದರೂ ಸಂಸ್ಕಾರಶೂನ್ಯ-ನಾದವನು ಬ್ರಹ್ಮಬಂಧು.

### ಭಾಷ್ಯದ ಮೇಲೆ ಬರುವ ಪ್ರಶ್ನೆಗಳಿಗೆ ಪರಿಹಾರ

ಎರಡನೇ ಅಧ್ಯಾಯದ 10ನೇ ಖಂಡದಲ್ಲಿ 'ಆಪ್ನೋತೀಹಾಽದಿತ್ಯಸ್ಯ ಜಯಂ' ಎಂಬ ಆರನೇ ಮಂತ್ರದಲ್ಲಿ ಬರುವ 'ಜಯ' ಶಬ್ದಕ್ಕೆ ಆಚಾರ್ಯರು ಭಾಷ್ಯದಲ್ಲಿ ''ಜಯೋ ನಾಮ ಪ್ರಾಪ್ತಿರೇವ ।' ಎಂದು ಹೇಳಿದ್ದಾರೆ. ಜಯಶಬ್ದಕ್ಕೆ ಪ್ರಾಪ್ತಿ ಎಂಬರ್ಥದಲ್ಲಿ 'ಧನಜಿತೇ ಸ್ವರ್ಜಿತೇ ಸತ್ರಾಜಿತೇ' ಎಂಬ ವೈದಿಕಪ್ರಯೋಗವನ್ನು ತೋರಿಸಿದ್ದಾರೆ. ಇಲ್ಲಿ ಶ್ರುತಿಯಲ್ಲಿ ಧನಜಿತೇ ಎಂಬುದಕ್ಕೆ ಮೊದಲು 'ವಿಶ್ವಜಿತೇ' ಎಂದಿದೆ. ಅದನ್ನೇಕೆ ಆಚಾರ್ಯರು ಉದಾಹರಿಸಲಿಲ್ಲ ? ಎಂಬ ಪ್ರಶ್ನೆ ಬರುವುದು

ಸಹಜ. ಆದಕ್ಕೆ ವೇದೇಶತೀರ್ಥರು ತಮ್ಮ ವ್ಯಾಖ್ಯಾನದಲ್ಲಿ ನೀಡುವ ಸಮಾಧಾನ ವಿದು. ''ವಿಶ್ವಜಿತೇ ಇತ್ಯಸ್ಯಾऽದಿತ್ವೇऽಪಿ ತಸ್ಯ ಜಯಾರ್ಥತ್ವೇऽಪಿ ಸಂಭವಾತ್ ತದನುದಾಹರಣಮ್ ।'' (ವಿಶ್ವಜಿತೇ ಎಂಬುದು ಶ್ರುತಿವಾಕ್ಯದ ಪ್ರಾರಂಭದಲ್ಲಿದ್ದರೂ ಅದು ಪ್ರಾಪ್ತಿ ಎಂಬ ಅರ್ಥದಲ್ಲಿ ಮಾತ್ರವಲ್ಲದೇ ಜಯ ಎಂಬ ಅರ್ಥದಲ್ಲಿಯೂ ದೃಷ್ಟಾಂತವಾಗಬಹುದಾದ್ದರಿಂದ ಅದನ್ನು ಆಚಾರ್ಯರು ಇಲ್ಲಿ ಉದಾಹರಿಸಿರು-ವುದಿಲ್ಲ ಎಂದು)

**ಆಯಾ ಅಧ್ಯಾಯಗಳ ಮಂಗಳಾಚರಣೆಯಲ್ಲಿ ಆಯಾ ಅಧ್ಯಾಯಗಳ ಸಾರಸಂಗ್ರಹ :**

ವೇದೇಶತೀರ್ಥರು ಭಾಷ್ಯಕ್ಕೆ ವ್ಯಾಖ್ಯಾನ ಮಾಡುವಾಗ ತಮ್ಮ ಪ್ರಾರಂಭದ ಮಂಗಲಾಚರಣೆಯ ಶ್ಲೋಕದಲ್ಲಿಯೇ ಆಯಾಯ ಅಧ್ಯಾಯದ ವಿಷಯವನ್ನು ಸೂಚಿಸುತ್ತಾರೆ.

ಉದಾಹರಣೆಗೆ, ಈ ಉಪನಿಷತ್ತಿನಲ್ಲಿ ಮೊದಲನೇ ಅಧ್ಯಾಯವು 'ಓಮಿತ್ಯೇತ-ದಕ್ಷರಮುದ್ಗೀಥಮುಪಾಸೀತ್' ಎಂಬ ವಾಕ್ಯದ ವಿವರಣರೂಪವಾಗಿದೆ. ಆಚಾರ್ಯರು ತಮ್ಮ ಭಾಷ್ಯದ ಮಂಗಲಾಚರಣೆಯಲ್ಲಿ **''ಅತ್ಯುದ್ರಿಕ್ತವಿದೋಷ-ಸತ್ಸುಖಮಹಾಜ್ಞಾನೈಕತಾನಪ್ರಭಾ ಸರ್ವಪ್ರಾಭವಶಕ್ತಿಭೋಗಬಲಸತ್ಸಾರಾತ್ಮದಿವ್ಯಾ-ಕೃತಿಂ ।''** ಎಂಬ ಮೊದಲನೆಯ ವಿಶೇಷಣದಿಂದ ಈ ಓಂಕಾರಾರ್ಥವಾದ ಗುಣ-ಪೂರ್ಣತ್ವವನ್ನು ವರ್ಣಿಸಿದ್ದಾರೆ. 'ಸೃಷ್ಟಿಸ್ಥಾನನಿರೋಧ' ಎಂಬುದರಿಂದ 'ಉದ್ಗೀಥ'-ಶಬ್ದಾರ್ಥವನ್ನು ವಿವರಿಸಿದ್ದಾರೆ.

**ಪ್ರಥಮಾಧ್ಯಾಯದ ಸಾರಸಂಗ್ರಹ**

ವೇದೇಶತೀರ್ಥರು

**''ಪೂರ್ಣಾನಂದ ಮಹಾವಿಬೋಧಮಖಿಲಂ ಸಂಭಾಸಯಂತಂ ರುಚಾ ।**

**ಸರ್ವತ್ರ ಪ್ರಭುಮೀಶ್ವರಂ ಗುಣನಿಧಿಂ ದಿವ್ಯಾಕೃತಿಂ ಕೇಶವಂ ।'** ಎಂದು ಪೂರ್ವಾರ್ಧದಿಂದ ಓಂಕಾರಾರ್ಥವಾದ ಗುಣಪೂರ್ಣತ್ವವನ್ನು ವರ್ಣಿಸಿದ್ದಾರೆ. ''ಜನ್ಮಾದ್ಯಸ್ಯ ಯತೋ ಹಿ ಸರ್ವಜಗತೋ .. '' ಎಂಬ ಉತ್ತರಾರ್ಧದಿಂದ 'ಉದ್ಗೀಥ'

ಶಬ್ದಾರ್ಥವನ್ನು ವಿವರಿಸುವ ಮೂಲಕ ಈ ಅಧ್ಯಾಯದ ವಿಷಯವನ್ನು ಸೂಚಿಸಿದ್ದಾರೆ.

## ದ್ವಿತೀಯಾಧ್ಯಾಯದ ಸಾರಸಂಗ್ರಹ

ಸಾಮಗಾನದ ಭಾಗಗಳು 5. (ಅ)ಹಿಂಕಾರ (ಆ) ಪ್ರಸ್ತಾವ (ಇ)ಉದ್ಗೀಥ (ಈ)ಪ್ರತಿಹಾರ (ಉ) ನಿಧನ ಎಂದು. ಈ ಐದು ಸಾಮಭಾಗಗಳಿಂದ ಪ್ರದ್ಯುಮ್ನ, ವಾಸುದೇವ, ನಾರಾಯಣ, ಅನಿರುದ್ಧ, ಸಂಕರ್ಷಣ ಎಂಬ ಭಗವಂತನ ಐದು ರೂಪಗಳು ಪ್ರತಿಪಾದ್ಯವಾಗಿವೆ. ಆ ಭಗವಂತನೇ ಎಲ್ಲ ಸಾಮಗಳಲ್ಲಿ ನೆಲೆಸಿದ್ದು ಸಾಮನಾಮಕನಾಗಿದ್ದಾನೆ ಎಂದು ಎರಡನೇ ಅಧ್ಯಾಯದಲ್ಲಿ ಹೇಳಲಾಗಿದೆ. ಇದರ ಸಾರವನ್ನು ವೇದೇಶತೀರ್ಥರು

**'ಪ್ರದ್ಯುಮ್ನಾದಿ ಸ್ವರೂಪೇಣ ಹಿಂಕಾರಾದ್ಯಾಭಿಧಂ ಹರಿಂ।**
**ಸಮಸ್ತಸಾಮಗಂ ವಂದೇ ಸಾಮನಾಮಾನಮೀಶ್ವರಮ್ ॥'** ಎಂದು ಸಂಗ್ರಹಿಸಿದ್ದಾರೆ.

## ಮೂರನೇ ಅಧ್ಯಾಯದ ಸಾರಸಂಗ್ರಹ

ಶ್ರೀಹರಿ ಸೂರ್ಯಮೊದಲಾದವರಲ್ಲಿ ನೆಲೆಸಿದ್ದಾನೆ. ವಸು ಮೊದಲಾದವರಿಂದ ಸೇವಿತನಾಗಿದ್ದಾನೆ. ಅಧ್ಯಾತ್ಮ ಎನಿಸಿರುವ ಅಗ್ನಿ, ಅಧಿದೈವ ಎನಿಸಿರುವ ವಾಗಾದಿ-ಗಳಲ್ಲಿ ನೆಲೆಸಿರುವವನೂ ಅವನೇ ಎಂಬುದು ಮೂರನೇ ಅಧ್ಯಾಯದಲ್ಲಿ ಪ್ರತಿಪಾದ್ಯವಾದ ವಿಷಯ. ಅದನ್ನು ಹೀಗೆ ಸಂಗ್ರಹಿಸಿದ್ದಾರೆ.

**'ಸೂರ್ಯಾದಿಸ್ಥಂ ಹರಿಂ ನಾನಾರೂಪಂ ವಸ್ವಾದಿಸೇವಿತಮ್ ।**
**ಸೂರ್ಯಾದಿಪಾಲಿತದ್ವಾರಂ ವಂದೇಽಧ್ಯಾತ್ಮಾಧಿದೈವಗಂ ॥'** ಎಂದು.

## ನಾಲ್ಕನೇ ಅಧ್ಯಾಯದ ಸಾರಸಂಗ್ರಹ

4ನೇ ಅಧ್ಯಾಯದಲ್ಲಿ ಬರುವ ಸಂವರ್ಗವಿದ್ಯೆಯಲ್ಲಿ ಪರಬ್ರಹ್ಮನೆನಿಸಿರುವ ಭಗವಂತನ ಬಗ್ಗೆ ಹಾಗೂ ಅಪರಬ್ರಹ್ಮನೆನಿಸಿರುವ ವಾಯುವಿನ ಬಗ್ಗೆ ವರ್ಣಿಸಲಾಗಿದೆ. ಅದರ ಸಾರವನ್ನು ಹೀಗೆ ಸಂಗ್ರಹಿಸಿದ್ದಾರೆ.

**'ಅಪರಂ ಬ್ರಹ್ಮ ವಾಯುಂ ಚ ಪರಂ ಬ್ರಹ್ಮ ಸುಖಾಧಿಕಮ್ ।**
**ವಾಸುದೇವಾದಿರೂಪಂ ಚ ವಾಮನಂ ಚಾನಿಶಂ ಭಜೇ ॥** ಎಂದು.

## ಐದನೇ ಅಧ್ಯಾಯದ ಸಾರಸಂಗ್ರಹ

5ನೇ ಅಧ್ಯಾಯದಲ್ಲಿ ಮೋಕ್ಷವನ್ನು ಪಡೆಯಲು ಬಯಸುವ ಜೀವಾತ್ಮ ಅವಶ್ಯವಾಗಿ ಅಪರಬ್ರಹ್ಮನೆನಿಸಿರುವ ವಾಯುವಿನ ಅನುಗ್ರಹವನ್ನು ಸಂಪಾದಿಸ-ಬೇಕೆಂದು ವಾಯುವಿನ ಮಹಿಮೆಯನ್ನು ವರ್ಣಿಸಿದೆ. ಹಾಗೆ ಪಂಚಾಗ್ನಿವಿದ್ಯೆಯಲ್ಲಿ ನಾರಾಯಣ ವಾಸುದೇವ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧ ಎಂಬ ಐದು ರೂಪಗಳುಳ್ಳ ಭಗವಂತನ ಮಹಿಮೆಯನ್ನು ವರ್ಣಿಸಲಾಗಿದೆ. ಅದನ್ನು ಹೀಗೆ ಸಂಗ್ರಹಿಸಿದ್ದಾರೆ.

**'ದೇವೋತ್ತಮಾಯ ಪ್ರಾಣಾಯ ಪಂಚರೂಪಾಯ ವಿಷ್ಣವೇ ।**
**ವೈಶ್ವಾನರಾಯ ದೇವಾಯ ನಮೋ ಭಗವತೇ ಸದಾ ॥'** ಎಂದು.

## ಆರನೇ ಅಧ್ಯಾಯದ ಸಾರಸಂಗ್ರಹ

6ನೇ ಅಧ್ಯಾಯದಲ್ಲಿ ಜೀವಪರಮಾತ್ಮರ ಭೇದವನ್ನು ಯುಕ್ತಿಗಳಿಂದ ಸಾಧಿಸಿ ಭಗವಂತನೇ ಪುರುಷೋತ್ತಮ ಎಂಬುದನ್ನು ಸಮರ್ಥಿಸಿದ್ದಾರೆ. ಅದನ್ನು

**'ತಸ್ಮೈ ನಮೋ ಭಗವತೇ ಚಿದಚಿತ್ಪರಮಾಯ ತೇ ।**
**ಪುರುಷೋತ್ತಮಾಯ ದೇವಾಯ ಪೂರ್ಣಾನಂದೈಕರೂಪಿಣೇ ॥'**
ಎಂಬುದಾಗಿ ಸಂಗ್ರಹಿಸಿದ್ದಾರೆ.

## ಏಳನೇ ಅಧ್ಯಾಯದ ಸಾರಸಂಗ್ರಹ

7ನೇ ಅಧ್ಯಾಯದಲ್ಲಿ ನಾಮಾಭಿಮಾನಿನಿ ಉಷೆಯಿಂದಾರಂಭಿಸಿ ಪ್ರಾಣದೇವರ ವರೆಗೆ ತಾರತಮ್ಯವನ್ನು ನಿರೂಪಿಸಿ ಪ್ರಾಣದೇವರೇ ಸರ್ವಶ್ರೇಷ್ಠರೆಂದು ಹೇಳಿ, ಅವರಿಗಿಂತಲೂ ಭಗವಂತನೇ ಶ್ರೇಷ್ಠನೆಂದು ನಿರೂಪಿಸಲಾಗಿದೆ. ಹಾಗೇ ಸತ್ಯ, ವಿಜ್ಞಾನ, ಮತಿ, ಶ್ರದ್ಧಾ, ನಿಷ್ಠಾ, ಕೃತಿ, ಸುಖ, ಭೂಮಾ, ಅಹಂ ಆತ್ಮಾ ಎಂಬ ಭಗವಂತನ ರೂಪಗಳ ಬಗ್ಗೆ ಈ ಅಧ್ಯಾಯದ 15ರಿಂದ 24ರವರೆಗಿನ ಖಂಡಗಳಲ್ಲಿ ವರ್ಣನೆ ಇದೆ. ಅದರ ಸಾರವನ್ನು ಹೀಗೆ ಸಂಗ್ರಹಿಸಿದ್ದಾರೆ.

**'ನಾಮಾದಿಪ್ರಾಣಪರ್ಯಂತದೇವಶ್ರೇಷ್ಠಾಯ ವಿಷ್ಣವೇ ।**
**ಸತ್ಯಾದ್ಯಾತ್ಮಾಂತರೂಪಾಯ ನಮೋ ಭಗವತೇ ಸದಾ ॥** ಎಂದು.

## ಎಂಟನೇ ಅಧ್ಯಾಯದ ಸಾರಸಂಗ್ರಹ

8ನೇ ಅಧ್ಯಾಯದಲ್ಲಿ ನಮ್ಮ ಹೃತ್ಕಮಲದಲ್ಲಿರುವ ಆಕಾಶದಲ್ಲಿ ಆಕಾಶನಾಮಕ-ನಾಗಿ ನೆಲಸಿರುವ ಭಗವಂತನ ಉಪಾಸನೆ ಕುರಿತಾದ ನಿರೂಪಣೆ ಇದೆ. ಅದನ್ನು ಹೀಗೆ ಸಂಗ್ರಹಿಸಿದ್ದಾರೆ.

**'ಹೃತ್ಪುಂಡರೀಕಗಾಕಾಶಗತಮಾಕಾಶನಾಮಕಮ್ ।**
**ನಾನಾರೂಪಂ ಜಾಗ್ರದಾದಿಪ್ರವರ್ತಕಮಹಂ ಭಜೇ ॥' ಎಂದು.**

### ಸಿದ್ಧಾಂತದಲ್ಲಿ ಪ್ರಸಿದ್ಧವಾದ ದೃಷ್ಟಾಂತದಿಂದ ಭಾರತೀದೇವಿ ತನಗಿಂತ ತಾನೇ ಹೇಗೆ ಉತ್ತಮಳು ಎಂಬುದರ ನಿರೂಪಣೆ :

ಕೆಲವೊಂದು ಸಮಸ್ಯೆಗಳನ್ನು ನಮ್ಮ ಸಿದ್ಧಾಂತದಲ್ಲಿ ಪ್ರಸಿದ್ಧವಾದ ಸುಂದರವಾದ ದೃಷ್ಟಾಂತಗಳಿಂದ ಪರಿಹರಿಸುವುದು ಇವರ ವ್ಯಾಖ್ಯಾನದ ಇನ್ನೊಂದು ವೈಶಿಷ್ಟ್ಯ. ಉದಾಹರಣೆಗೆ ಒಂದನೇ ಅಧ್ಯಾಯದ ಒಂದನೇ ಖಂಡದ ಮೂರನೇ ಮಂತ್ರದಲ್ಲಿ ಬರುವ 'ವಾಗೇವರ್ಕ್' ಎಂಬಲ್ಲಿರುವ ಋಕ್ ಶಬ್ದಕ್ಕೆ ವ್ಯಾಖ್ಯಾನಮಾಡುವಾಗ

**''ವಿಶೇಷಾತ್ ಪ್ರಾಣಸಂಯುಕ್ತಾ ವಾಗ್ ಋಗಿತ್ಯಭಿಧೀಯತೇ ।**
**ವಿಶೇಷಸಂಯೋಗಹೀನಾ ಯದಾ ಸೈವ ಸರಸ್ವತೀ ॥**
**ತದಾ ತಸ್ಯಾವರಾ ಸೈವ ಪ್ರಾಣಸಂಯೋಗಿನೀ ಮತಾ ''** (ವಿಶೇಷವಾಗಿ ಪ್ರಾಣನಿಂದ ಜೊತೆಗೂಡಿದಾಗ ಸರಸ್ವತಿದೇವಿಯು 'ಋಕ್ ಎನಿಸುತ್ತಾಳೆ) ಪ್ರಾಣನ ವಿಶೇಷಸಂಯೋಗವಿಲ್ಲದಿರುವಾಗ ಆಗ ಅವಳಿಗಿಂತ ಪ್ರಾಣಸಂಯೋಗವಿರುವ ತಾನೇ ಉತ್ತಮಳೆನಿಸುತ್ತಾಳೆ ಎಂದು ಆಚಾರ್ಯರು ಹೇಳುತ್ತಾರೆ.

ಆದರೆ ನಮಗಿಲ್ಲಿ ಬರುವ ಸಮಸ್ಯೆ ಎಂದರೆ ಸರಸ್ವತೀದೇವಿ ತನಗಿಂತ ತಾನೇ ಉತ್ತಮಳಾಗುವದು ಹೇಗೆ ಎಂದು.

ಇದಕ್ಕೆ ವೇದೇಶತೀರ್ಥರು ನೀಡುವ ಸಮಾಧಾನ ಹೀಗಿದೆ ಲಕ್ಷ್ಮೀದೇವಿಯ ಯಜ್ಞನಾಮಕ ರೂಪವು ಭಗವಂತನ ಉರಸ್ಥಲವನ್ನಾಶ್ರಯಿಸಿದೆ. ದಕ್ಷಿಣೆಗೆ ಅಭಿಮಾನಿಯಾದ್ದರಿಂದ 'ದಕ್ಷಿಣಾ' ಎಂದು ಪ್ರಸಿದ್ಧವಾದ ರೂಪವು ಭಗವಂತ ಶರೀರದಲ್ಲಿ ಅರ್ಧಭಾಗವನ್ನು ಪೂರ್ತಿಯಾಗಿ ಆಕ್ರಮಿಸಿಕೊಂಡಿದೆ. ಇವುಗಳಲ್ಲಿ

ಸ್ವರೂಪತಃ ಉತ್ತಮ ಅಧಮ ಎಂಬ ಭೇದವಿಲ್ಲದಿದ್ದರೂ. ಯಜ್ಞಾಭಿಮಾನಿ-ರೂಪಕ್ಕಿಂತ ದಕ್ಷಿಣಾಭಿಮಾನಿರೂಪ ಭಗವಂತನಿಗೆ ಅತಿ ಹೆಚ್ಚು ಹತ್ತಿರವಾಗಿರುವು-ದರಿಂದ ಹೇಗೆ ಉತ್ತಮವೋ ಹಾಗೆ ಭಾರತೀದೇವಿಯ ರೂಪಗಳಲ್ಲಿ ಉತ್ತಮ ಅಧಮ ಎಂಬ ಭೇದವಿಲ್ಲದಿದ್ದರೂ ಪ್ರಾಣಸಂಯೋಗವಿಲ್ಲದ ರೂಪಕ್ಕಿಂತ ಪ್ರಾಣಸಂಯೋಗವಿರುವ ರೂಪವು ಉತ್ತಮ ಎಂದು ಹೇಳಿರುವದು ಸಿದ್ಧಾಂತ ಪ್ರಕಾರ ಸಮಂಜಸವೇ ಆಗಿದೆ.

ಹೀಗೆ ಗ್ರಂಥದ ಉದ್ದಗಲಕ್ಕೂ ವೀಕ್ಷಿಸಿದಾಗ ಅನೇಕನೇಕ ವಿಷಯಗಳ ಬಗ್ಗೆ ಇವರ ವ್ಯಾಖ್ಯಾನ ಕ್ಷಕಿರಣ ಬೀರಿರುವದನ್ನು ಕಾಣಬಹುದುದಾಗಿದೆ. ಅವುಗಳಲ್ಲಿ ಕೆಲವು ವಿಷಯಗಳ ಬಗ್ಗೆ ಸ್ಥಾಲೀಪುಲಾಕ ನ್ಯಾಯದಂತೆ ಇಲ್ಲಿ ವಿವರಿಸಲಾಗಿದೆ.

ಇತಿ ನಿಮ್ಮ,

30-04-2004

ವಿ. ರಂಗನಾಥ ಕಟ್ಟಿ

ವಿ.ಶಂಕರನಾರಾಯಣ ಅಡಿಗ



## ಕೃತಜ್ಞತಾ ಸಮರ್ಪಣೆ

'ಪೂರ್ಣಪ್ರಜ್ಞವಿದ್ಯಾಪೀಠ' ದಂತಹ ಉನ್ನತ ವಿದ್ಯಾಕೇಂದ್ರವನ್ನು ತೆರೆದು ನೂರಾರು ವಿದ್ಯಾರ್ಥಿಗಳಿಗೆ ಅನುದಿನವು ಅನ್ನದಾನ ವಿದ್ಯಾದಾನಗಳನ್ನು ಮಾಡುತ್ತಿರುವ ಪರಮಪೂಜ್ಯರೂ ಪೇಜಾವರ ಮಠಾಧೀಶರೂ ಆದ 1008 ಶ್ರೀ ಶ್ರೀ **ವಿಶ್ವೇಶತೀರ್ಥಶ್ರೀಪಾದರಿಗೆ** ನಮ್ಮ ಭಕ್ತಿಪೂರ್ವಕ ಸಾಷ್ಟಾಂಗಪ್ರಣಾಮಗಳು. ವಿದ್ಯಾಪೀಠದಲ್ಲಿ ನಮ್ಮಂತಹ ಪಾಮರರಿಗೆ ವಿದ್ಯಾರ್ಜನೆಗೆ ಅವಕಾಶ ಮಾಡಿಕೊಟ್ಟು ಈಗ ಅವರೇ ಹುಟ್ಟುಹಾಕಿರುವ ''ಪೂರ್ಣಪ್ರಜ್ಞಸಂಶೋಧನ ಮಂದಿರದಲ್ಲಿ'' ಪ್ರಾಚೀನ ಗ್ರಂಥಗಳ ಸಂಶೋಧನೆ ಸಂಪಾದನೆಗಳಿಗೆ ಅವಕಾಶ ಮಾಡಿಕೊಟ್ಟು ನಮ್ಮ ಜೀವನವನ್ನು ಪಾವನವನ್ನಾಗಿಸಿದ ಮಹನೀಯರು ಅವರು. ಅವರ ಉಪಕಾರ ಅಪಾರ. ಅದನ್ನು ನೆನೆದು ಅವರಿಗೆ ಮತ್ತೊಮ್ಮೆ ನಮ್ಮ ಭಕ್ತಿಪೂರ್ವಕ ನಮಸ್ಕಾರಗಳನ್ನು ಅರ್ಪಿಸುತ್ತೇವೆ.

ಈ ಗ್ರಂಥದ ಮುದ್ರಣದ ಭಾರವನ್ನು ಭರಿಸಲು ಸಹಕರಿಸಿದ ರಾಷ್ಟ್ರಿಯ ಸಂಸ್ಕೃತ ಸಂಸ್ಥಾನದ ಕುಲಪತಿಗಳಾದ **ಪ್ರೊ.ಕುಟುಂಬಶಾಸ್ತ್ರಿಗಳಿಗೆ** ನಾವು ಚಿರಋಣಿ-ಯಾಗಿದ್ದೇವೆ.

ಈ ಗ್ರಂಥದ ಸಂಪಾದನೆಯಲ್ಲಿ ತೊಡಗಿದ ನಮ್ಮನ್ನು ಹುರಿದುಂಬಿಸಿ ಸೂಕ್ತಸಲಹೆಗಳನ್ನಿತ್ತು ಸಹಕರಿಸಿದ ಸಂಶೋಧನ ಮಂದಿರದ ನಿರ್ದೇಶಕರಾದ ಡಾ. **ಎ.ವಿ. ನಾಗಸಂಪಿಗೆಯವರಿಗೆ** ನಮ್ಮ ಹೃತ್ಪೂರ್ವಕ ಕೃತಜ್ಞತೆಗಳು.

ಸಂಶೋಧನೆಯ ವಿಧಾನವನ್ನು ಬೋಧಿಸಿ ಹಿಂದಿನಿಂದಲೂ ಮಾರ್ಗದರ್ಶನ ನೀಡುತ್ತಿರುವ ಪ್ರಕೃತ ತಿರುಪತಿಯ ರಾಷ್ಟ್ರಿಯ ಸಂಸ್ಕೃತ ವಿದ್ಯಾಪೀಠದ ಕುಲಪತಿ-ಗಳಾಗಿರುವ **ಪ್ರೊ.ಡಿ.ಪ್ರಹ್ಲಾದಾಚಾರ್ಯ**ರಿಗೆ ನಮ್ಮ ಹೃತ್ಪೂರ್ವಕ ಕೃತಜ್ಞತೆಗಳು.

ವಿದ್ಯಾಪೀಠದ ಉಪಕುಲಪತಿಗಳೂ ಹಲವಾರು ಗ್ರಂಥಗಳ ಪ್ರಕಾಶನದಿಂದ ಜನಜನಿತರೂ ಆಗಿರುವ **ಪ್ರೊ. ಕೆ.ಟಿ.** ಪಾಂಡುರಂಗಿಯವರಿಗೂ ನಮ್ಮ ಧನ್ಯವಾದ-ಗಳು.

ಗ್ರಂಥದ ಸಂಪಾದನೆಯಲ್ಲಿ ತೊಡಗಿದ ನಮಗೆದುರಾದ ಗ್ರಂಥಕ್ಕೆ ಸಂಬಂಧಿಸಿದ

ತೊಡಕುಗಳನ್ನೆಲ್ಲಾ ನಿವಾರಿಸಿ ಉಪಕರಿಸಿದವರು ವಿದ್ಯಾಪೀಠದ ಭೂತಪೂರ್ವ ಪ್ರಾಂಶುಪಾಲರಾದ **ಶ್ರೀಹಯವದನ ಪುರಾಣಿಕರು**. ಈಗ ತಿರುಪತಿಯ ಆಗಮ-ವಿಭಾಗದಲ್ಲಿ ಸೇವೆಸಲ್ಲಿಸುತ್ತಿರುವ ಅವರಿಗೆ ಹಾಗೂ ವಿದ್ಯಾಪೀಠದ ಹಾಲಿ ಪ್ರಾಂಶುಪಾಲರಾಗಿರುವ **ಶ್ರೀ ಹರಿದಾಸಭಟ್ಟರಿಗೂ** ನಮ್ಮ ಆದರಪೂರ್ವಕ ಕೃತಜ್ಞತೆಗಳು.

ಛಾಂದೋಗ್ಯೋಪನಿಷದ್ ಭಾಷ್ಯದ ಟೀಕೆ ವೇದೇಶೀಯದ ಎರಡು ಅಪರೂಪದ ಹಸ್ತಪ್ರತಿಗಳನ್ನಿತ್ತು ಸಹಕರಿಸಿದ **ಪಂ. ಶ್ರೀಪ್ರದೀಪಸಿಂಹ** ಅವರಿಗೂ ನಾವು ಆಭಾರಿಗಳಾಗಿದ್ದೇವೆ.

ಈ ಗ್ರಂಥದ ಮುನ್ನುಡಿಯನ್ನು ಆಂಗ್ಲಭಾಷೆಗೆ ಅನುವಾದಿಸಿದ ಶ್ರೀ**ಗುರುರಾಜ ರಾವ್**,ಮೈಸೂರು ಇವರಿಗೂ ನಮ್ಮ ಹೃತ್ಪೂರ್ವಕ ಕೃತಜ್ಞತೆಗಳು.

ಅತ್ಯಂತ ಶ್ರದ್ಧೆಯಿಂದ ಡಿ.ಟಿ.ಪಿ. ಕಾರ್ಯವನ್ನು ನಿರ್ವಹಿಸಿದ ಶ್ರೀಸುಬ್ಬಣ್ಣ-ನವರಿಗೂ ನಮ್ಮ ಹೃತ್ಪೂರ್ವಕ ಕೃತಜ್ಞತೆಗಳು.

ಈ ಗ್ರಂಥದ ಸಂಪಾದನೆಯಲ್ಲಿ ಅತ್ಯುಪಯುಕ್ತವಾದ ಎರಡು ಹಸ್ತಪ್ರತಿಗಳನ್ನು ಕೊಟ್ಟು ಉಪಕರಿಸಿದವರು ಪ್ರದೀಪಸಿಂಹರವರು. ಆ ಹಸ್ತಪ್ರತಿಗಳ ಸಹಾಯದಿಂದ ಹಾಗೂ ಪೂರ್ಣಪ್ರಜ್ಞಸಂಶೋಧನ ಮಂದಿರದ ಗ್ರಂಥಾಲಯದಲ್ಲಿದ್ದ ಹಸ್ತಪ್ರತಿ-ಯೊಂದರ ಸಹಾಯದಿಂದಲೂ ಮುದ್ರಿತಪುಸ್ತಕದಲ್ಲಿದ್ದ ಅನೇಕ ತಪ್ಪುಗಳನ್ನು ತಿದ್ದಲಾಗಿದೆ. ಪಾಠಭೇದಗಳನ್ನು ಅಡಿಟಿಪ್ಪಣಿಯಲ್ಲಿ ಕೊಡಲಾಗಿದೆ.

ಅಡಿಟಿಪ್ಪಣಿಯಲ್ಲಿರುವ 'ಹೃ' ಎಂಬ ಸಂಕೇತದಿಂದ ವಿದ್ಯಾವಾಚಸ್ಪತಿ ಬನ್ನಂಜೆ ಗೋವಿಂದಾಚಾರ್ಯರು ಸಂಶೋಧಿಸಿ ಸಂಪಾದಿಸಿದ 'ಹೃಷಿಕೇಶೀಯ ಪಾಠಾನು-ಸಾರಿ ಸರ್ವಮೂಲಗ್ರಂಥ'ವನ್ನು ಸೂಚಿಸಲಾಗಿದೆ. 'ಪ್ರಭ' ಎಂಬುದರಿಂದ ವಿದ್ವಾನ್ ಪ್ರಭಂಜನಾಚಾರ್ಯರು ಸಂಪಾದಿಸಿದ ಸರ್ವಮೂಲದ ಪಾಠವನ್ನು ಸೂಚಿಸ-ಲಾಗಿದೆ. 'ಪ್ರ' ಹಾಗೂ 'ಪ್ರಪಾಠಾಂತರ' ಎಂಬುದರಿಂದ ಪ್ರಚಲಿತ ಪಾಠಾಂತರವನ್ನು ಸೂಚಿಸಲಾಗಿದೆ. 'ಕ' ಎಂಬುದರಿಂದ ಟಿ.ಆರ್.ಕೃಷ್ಣಾಚಾರ್ಯರಿಂದ ಮುದ್ರಿತವಾದ ಪುಸ್ತಕದಲ್ಲಿರುವ ಪಾಠವನ್ನು ಸೂಚಿಸಲಾಗಿದೆ.

ಜಿಜ್ಞಾಸುಗಳಾದ ಓದುಗರ ಅನುಕೂಲಕ್ಕಾಗಿ ವಿಷಯಾನುಕ್ರಮಣಿಕೆಯನ್ನು ಕೊಡಲಾಗಿದೆ. ಹೀಗೆ ಕಷ್ಟಪಟ್ಟು ಬಹಳಪರಿಶ್ರಮದಿಂದ ಸಂಶೋಧಿಸಿ ಸಂಪಾದಿಸಿದ ಈ ಕೃತಿಯಲ್ಲಿ ಅಲ್ಲಲ್ಲಿ ನಮ್ಮ ಗಮನಕ್ಕೆ ಬಾರದೇ ಕೆಲವೊಂದು ದೋಷಗಳು ನುಸುಳಿರುವ ಸಾಧ್ಯತೆ ಇದ್ದೇ ಇದೆ. ಅದನ್ನು ಪರಿಗಣಿಸದೇ ಉದಾರಹೃದಯದ ಸಜ್ಜನರು ಈ ಗ್ರಂಥವನ್ನು ತುಂಬು ಅಭಿಮಾನದಿಂದ ಬರಮಾಡಿಕೊಳ್ಳುವಿರೆಂದು ಭಾವಿಸಿ ಈ ಕೃತಿಯನ್ನು ಅಸ್ಮದ್ಗುರ್ವಂತರ್ಗತಭಾರತೀಪತ್ಯಂತರ್ಗತಶ್ರೀಕೃತಿಪತಿಯ ಅಡಿದಾವರೆಗಳಲ್ಲಿ ಭಕ್ತಿಪೂರ್ವಕವಾಗಿ ಸಮರ್ಪಿಸುತ್ತಿದ್ದೇವೆ.

ಇತಿ ನಿಮ್ಮ,

30-04-2004

**ವಿ. ರಂಗನಾಥ ಕಟ್ಟಿ**

**ವಿ.ಶಂಕರನಾರಾಯಣ ಅಡಿಗ**

# विषयानुक्रमणिका

| विषयाः | पृष्ठसङ्ख्या |
|---|---|

| विषयाः | पृष्ठसङ्ख्या |
|---|---|

| विषयाः | पृष्ठसङ्ख्या |
|---|---|

| विषयाः | पृष्ठसङ्ख्या |
|---|---|

| विषयाः | पृष्ठसङ्ख्या |
| --- | --- |

| विषयाः | पृष्ठसङ्ख्या |
|---|---|

| विषयाः | पृष्ठसङ्ख्या |
|---|---|
| जाग्रदवस्थायां जीवः परमात्माधीन इति प्रतिपादनम् | ५३० |
| परमात्मनो जगत्कर्तृत्वमेव, न तदुपादानत्वम् | ५३१ |
| मुक्तौ मरणावस्थायां च देवतानां लयक्रमकथनम् | ५३५ |
| अतत्त्वमसिवाक्यार्थः | ५३७ |
| जीवब्रह्मभेदविषये पुष्परसदृष्टान्तः | ५४६ |
| जीवब्रह्मभेदविषये नदीसमुद्रदृष्टान्तः | ५५० |
| 'जीवोऽस्वतन्त्रः' इत्यस्मिन् विषये वृक्षदृष्टान्तः | ५५२ |
| परमात्मनोऽप्रत्यक्षत्वविषये वटबीजदृष्टान्तः | ५५५ |
| 'परमात्मनः कार्यं प्रत्यक्षम्' इति विषये लवणोदकदृष्टान्तः | ५५९ |
| गुरूपदेशादेव भगवत्प्राप्तिः | ५६१ |
| मनुष्यस्यास्वातन्त्र्यविषये मरणावस्थानिदर्शनम् | ५६४ |
| अभेदज्ञानस्यानर्थकारित्वे चोरदृष्टान्तः | ५६६ |
| 'स्वमपीतो भवति' इति श्रुतेरभेदपरत्वनिरासः | ५७० |
| नव दृष्टान्ता अपि भेदपरा एव | ५७६ |
| नैकोऽपि दृष्टान्तोऽभेदपरः | ५७७ |
| विष्णुसर्वोत्तमत्वं सकलशास्त्राणां मुख्यतात्पर्यम् | ५७९ |
| जीवब्रह्मैक्यस्य न शास्त्रतात्पर्यविषयता | ५८७ |
| जीवब्रह्मैक्यं सकलशास्त्रमुख्यतात्पर्यविरुद्धम् | ५९० |
| अभेदपरत्वेन प्रतीयमानानि वाक्यान्यपि वस्तुतो भेदपराणि | ५९४ |
| मोक्षेऽपि विद्यमानजीवब्रह्मभेदो नातात्त्विकः | ५९५ |
| अस्मिन्नेव प्रकरणे जीवब्रह्मभेदप्रतिपादकवाक्यानि विपुलानि सन्तीति प्रदर्शनम् | ५९८ |
| नानुकूलश्चोरदृष्टान्तोऽभेदस्य | ६०० |
| भेदाभेदोऽपि शास्त्रमहातात्पर्यविरोधी | ६०५ |

| विषयाः | पृष्ठसङ्ख्या |
|---|---|

| विषयाः | पृष्ठसङ्ख्या |
|---|---|

| विषयाः | पृष्ठसङ्ख्या |
|---|---|


* * * * *

।।श्रीमद्धनुमद्भीममध्वान्तर्गतश्रीरामकृष्णवेदव्यासात्मकलक्ष्मीहयग्रीवाय नमः।।

# छान्दोग्योपनिषत्-भाष्य-वेदेशीयटीका-खण्डार्थाः

## उपनिषत्

*।। शान्तिमन्त्रः ।।*

।। हरिः ॐ ।। आप्यायन्तु ममाङ्गानि वाक्प्राणश्चक्षुःश्रोत्रमथो बलमिन्द्रियाणि च सर्वाणि सर्वं ब्रह्मौपनिषदं माऽहं ब्रह्म निराकुर्यां मा मा ब्रह्म निराकरोदनिराकरणमस्त्वनिराकरणं मेऽस्तु तदात्मनि निरते य उपनिषत्सु धर्मास्ते मयि सन्तु ते मयि सन्तु ।।

ॐ शान्तिः शान्तिः शान्तिः ।।

### श्रीमदानन्दतीर्थभगवत्पादाचार्यविरचितं भाष्यम्

*भाष्ये मङ्गलाचरणम्*

।।ॐ।।अत्युद्रिक्तविदोषसत्सुखमहाज्ञानैकतानप्रभा-

सर्वप्राभवशक्तिभोगबलसत्सारात्मदिव्याकृतिम् ।

सृष्टिस्थाननिरोधनित्यनियतिज्ञानप्रकाशावृति-

ध्वान्तामोक्षविमोक्षदं हरिमजं नित्यं सदोपास्महे ।। १ ।।

*श्रीवेदेशभिक्षुविरचिता पदार्थकौमुदी*

### भाष्यार्थः

।।ॐ।। पूर्णानन्दमहाविबोधमखिलं सम्भासयन्तं रुचा

सर्वत्र प्रभुमीश्वरं गुणनिधिं दिव्याकृतिं केशवम् ।

